# ಸುಭದ್ರ ಸುನಿಶ್ಚಿತ ವಿಧಾನದ ಕುರಿತು
## ಜೀವನ್ ಹನುಮರ ಸಂವಾದ



ಜೀವನ್ ನಿನ್ನೊಂದಿಗೆ ಅಲೆದಾಡುವುದೆಂದರೆ ನನಗೆ ಎಲ್ಲಿಲ್ಲದ ಆನಂದ.
ಇನ್ನು ನೀನುಣಿಸುವ ಆ ಬಾಳೆಹಣ್ಣುಗಳ ಸವಿ.
ನಿನ್ನ ಹೆಗಲಲ್ಲಿ ಮಾಡುವ ಸುಖನಿದ್ರೆ. ನಿನ್ನನ್ನಗಲಿ ನಾನೆಂತು ಬಾಳಲಿ ?

ನೀನೋರ್ವ ಮದಾರಿ (ಮಂಗ ಕುಣಿಸುವವ) ಯೊಡನೆ ಕೆಲಸ ನೋಡಬಹುದು.
ನಿನ್ನ ಕುಣಿತ, ಚೇಷ್ಟೆಗಳಿಂದ ಸುಲಭವಾಗಿ ಹೊಟ್ಟೆಹೊರೆಯಬಹುದು.

ಅಯ್ಯೋ ಅದೆಷ್ಟು ಅಸಹ್ಯ ವಿಚಾರವಿದು ?
ಇದಕ್ಕಿಂತ ಉತ್ತಮವಾದ ಬೇರೆ ಜೀವನೋಪಾಯವಿಲ್ಲವೆ ?

योगक्षेम वहाम्यहम

ಇದೆ, ಇದೆ ನಿನ್ನ ಭವಿಷ್ಯವನ್ನು ರಕ್ಷಿಸುವ ಸುಲಭ ಸುಭದ್ರ ಮಾರ್ಗವೊಂದಿದೆ.
ಅದರ ಹೆಸರು ಜೀವವಿಮೆ.

ಹಾಗೆಂದರೇನು ?

ಇಂದಿನ ಉಳಿತಾಯದಿಂದ ಭವಿಷ್ಯದ ಅವಶ್ಯಕತೆಗಳನ್ನೆದುರಿಸಲು ಯೋಗ್ಯ ವ್ಯವಸ್ಥೆಗೈಯುವ ಒಂದು ವಿಧಾನವಿದು.
ಮೊದಲು ನಾವು ಜೀವವಿಮಾ ನಿಗಮಕ್ಕೆ ನಿಶ್ಚಿತ ಅವಧಿಗಳಲ್ಲಿ ಪೂರ್ವಸೂಚಿತ ಹಣದ ಕಂತುಗಳನ್ನು
ಕಟ್ಟಲು ಒಪ್ಪಬೇಕು. ಅವರು ಆ ಹಣವನ್ನುಪಯೋಗಿಸಿ ಹೆಚ್ಚಿಗೆ ಧನಸಂಪಾದಿಸುವರು.
ಇದನ್ನು ಲಾಭಾರ್ಥ ಧನವಿನಿಯೋಗವೆಂದೂ ಕರೆಯಲಾಗುತ್ತದೆ.

ಆ ಕೆಲಸವನ್ನು ನಾವೇ ಮಾಡಬಹುದಲ್ಲ! ಅವರಿಗೆ ಕೊಡುವುದರಿಂದ ಲಾಭಬೇನು ?

ವ್ಯತ್ಯಾಸವಿದೆ, ಬಹಳ ವ್ಯತ್ಯಾಸವಿದೆ. ಒಂದೊಮ್ಮೆ ಅಕಸ್ಮಾತ್ ನನಗೇನಾದರೂ
ಆಯಿತೆಂದುಕೋ– ಬರುವ ವಾರ, ಅದೇಕೆ ಇಂದಿನಿಂದ ನಾಳೆಗೆ ಕೂಡ–
ಆಗ ನಿಗಮವು ನಿನಗೊಂದು ಭಾರಿ ಹಣದ ಮೊತ್ತವನ್ನು ನೀಡಿ
ಸ್ವಾವಲಂಬಿಯಾಗಿ ಜೀವನ ನಡೆಸಲು ಸಹಾಯ ಮಾಡುವುದು.

ಅಂದರೆ ನಾವು ತೆರುವುದಕ್ಕಿಂತ ಅಧಿಕ ಮೊತ್ತ
ನಮಗೆ ಅವರು ಮರುಪಾವತಿ ಮಾಡುವರೆ ?




ಹೆಚ್ಚು, ಲಾಭಾರ್ಥಧನವಿನಿಯೋಗದ ಇತರ
ವಿಧಾನಗಳಿಗಿಂತ ಅತಿ ಹೆಚ್ಚು. ಆಕಸ್ಮಿಕವೇನೂ
ಸಂಭವಿಸದಿದ್ದರೆ ಪೂರ್ವನಿರ್ಧಾರಿತ ವರ್ಷಗಳ
ನಂತರ ನಾವು ತೊಡಗಿಸಿದ ಎಲ್ಲಾ ಹಣ
ಮರುಪಾವತಿ ಮಾಡಲಾಗುವುದಲ್ಲದೆ
ಲಾಭಾಂಶವೂ
ದೊರೆಯುವುದು.

ಮನುಷ್ಯರ ದೂರದರ್ಶಿತ್ವ ನಿಜವಾಗಿ ಮೆಚ್ಚಬೇಕಾದುದೇ!

**ಜೀವವಿಮೆಯ ಕುರಿತು ಹೆಚ್ಚಿನ ವಿವರ ಸಂಗ್ರಹಿಸಿರಿ**

ಉಚಿತವಾಗಿ ನೀಡಲಾಗುವ ನಮ್ಮ ಬಣ್ಣದ ಪುಸ್ತಿಕೆ (ಜೀವನ್, ಹನುಮರ 6 ರೋಮಾಂಚಕಾರಿ ಸ್ಟಿಕ್ಕರ್–ಗಳೊಂದಿಗೆ–ಇಂಗ್ಲಿಷ್ ವ ಹಿಂದಿಯಲ್ಲಿ ಮಾತ್ರ) ಗಳಿಗಾಗಿ ಬರೆಯಿರಿ: ಜೀವನ್ ಆಂಡ್ ಹನು, ಪಿ. ಆರ್ ಆಂಡ್ ಪಬ್ಲಿಸಿಟಿ ಡಿಪಾರ್ಟ್‌ಮೆಂಟ್, ಎಲ್. ಐ. ಸಿ, ಸೆಂಟ್ರಲ್ ಆಫೀಸ್, ಪೋಸ್ಟ್ ಬಾಕ್ಸ್ ನಂ. 252, ಮುಂಬಯಿ-400021

**ಭಾರತೀಯ ಜೀವವಿಮಾ ನಿಗಮ**

daCunha-LIC-105 KN

ಡಾಕ್ಟರ್, ನನ್ನ ಮಗೂಗೆ
ಮೈ ಚೆನ್ನಾಗಿಲ್ಲ, ತುಂಬಾ
ಸೂರಗಿದಾಳೆ. ಏನೂಂತ
ಸ್ವಲ್ಪ ನೋಡ್ತೀರಾ, ಪ್ಲೀಸ್?

ಜ್ವರ ಇಲ್ಲ ಕಣೇ, ಸ್ವಲ್ಪ
ಹೊಟ್ಟೆ ತೊಂದರೆ, ಅಷ್ಟೇ.
ವುಡ್‌ವರ್ಡ್ಸ್ ಗ್ರೈಪ್
ವಾಟರ್ ಕೊಟ್ಟುಬಿಟ್ಟರೆ
ಸಾಕು.

ಮಳೆ ಸುರೀತಾ ಇದೆ
ಯಲ್ಲ, ಡಾಕ್ಟರ್
ವುಡ್‌ವರ್ಡ್ಸ್ ಗ್ರೈಪ
ವಾಟರನ್ನ ಈಗ ನಾನು
ಅವಳಿಗೆ ಕೊಡಬೋದಾ!

ಕೊಡಬೋದಮ್ಮಾ, ಊಂ ಮಳೆ, ಬಿಸಿಲು
ಚಳಿ, ಯಾವಾಗ ಬೇಕಾದ್ರೂ, ಮಕ್ಕಳ
ಆರೋಗ್ಯಕ್ಕಾಗಿ ಇರೋದೇ ಈ
ವುಡ್‌ವರ್ಡ್ಸ್ ಗ್ರೈಪ್ ವಾಟರ್.






100 ವರ್ಷಗಳಿಗೂ ಹೆಚ್ಚು ಕಾಲ
ಮಾತೃಲೋಕದ ವಿಶ್ವಾಸಪಾತ್ರವಾದುದು

# ವುಡ್‌ವರ್ಡ್ಸ್ ಗ್ರೈಪ್ ವಾಟರ್

CAS OPPL 3/80 KN

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಅಪೂರ್ವವಾಗಿ ಮಕ್ಕಳಾದರೆ ಹೆತ್ತವರ ಪ್ರೀತಿ ಹೆಚ್ಚಿಗೆ ಇರುವುದು ಸಹಜವೇ. ಅದು ಉಕ್ಕಿ ಚೆಲ್ಲುವುದರಿಂದ ಆ ಮಕ್ಕಳಿಗೂ ಒಳ್ಳೆಯದಲ್ಲ, ಹೆತ್ತವರಿಗೂ ಒಳ್ಳೆಯದಲ್ಲ. ವಿವೇಕದಿಂದ ಅಂತಹ ಭಾವಗಳನ್ನು ಹದ್ದಿನಲ್ಲಿಟ್ಟುಕೊಂಡು ಮಕ್ಕಳನ್ನು ಬೆಳೆಯಿಸಿದರೇನೇ, ಸರಿಯಾದ ಮಾನವರಾಗಿ ಬೆಳೆಯುತ್ತ, ಹೆತ್ತವರಿಗೂ ಸಮಾಜಕ್ಕೂ ಒಳಿತನ್ನು ಮಾಡುವವರಾಗುತ್ತಾರೆ. ಈ ಪ್ರಜ್ಞೆಯನ್ನು ಮೀಂಟುವಂತಿದೆ ಈ ಸಂಚಿಕೆಯಲ್ಲಿರುವ "ಎಲ್ಲಾ ಒಂದೇ ಸಾರಿ" ಎಂಬ ಕಥೆ.

## ಅಮರವಾಣಿ

ತ್ಯಾಗ ಏಕೋ ಗುಣಃ ಶ್ಲಾಘ್ಯಃ ಕಿಮನ್ಯೈರ್ಗುಣರಾಶಿಭಿಃ
ತ್ಯಾಗಾಜ್ಜಗತಿ ಪೂಜ್ಯಂತೇ ಪಶು ಪಾಷಾಣ ಪಾದಪಾಃ

ಇತರ ಒಳ್ಳೆಯ ಗುಣಗಳು ಎಷ್ಟಿದ್ದರೂ ತ್ಯಾಗಗುಣವೊಂದೇ ಮೆಚ್ಚತಕ್ಕುದು. ಪರರಿಗೆ ಒಳಿತು ಮಾಡುವುದರಿಂದಲೇ ಪಶುಗಳೂ ಫಲವೃಕ್ಷಗಳೂ, ಬಂಡೆ ಕಲ್ಲುಗಳೂ ಸಹ ಜಗತ್ತಿನಲ್ಲಿ ಆದರಣೆಗೆ ಪಾತ್ರವಾಗುತ್ತವೆ.

ಸಂಪುಟ : ೬೬ ಫೆಬ್ರವರಿ '೮೧ ಸಂಚಿಕೆ : ೨

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦






**ಶ್ರೀಕಂಠಂ ಮಾಧವರಾವ್, ನೆಲ್ಲೂರು**

ಪ್ರ: ವಿಶ್ವಾಸಕ್ಕೂ, ವಿಜ್ಞಾನಕ್ಕೂ ಇರುವ ಸಂಬಂಧವೇನೆಂಬುದನ್ನು, ಅಂದರೆ ಯಾವ ಯಾವ ಸಂದರ್ಭಗಳಲ್ಲಿ ವಿಶ್ವಾಸವು ವಿಜ್ಞಾನವನ್ನು ಅಧಿಗಮಿಸುತ್ತದೆಂಬುದನ್ನು ಹೇಳಲು ಸಾಧ್ಯವಾದೀತೆ?

ಉ: ಮನುಷ್ಯನು ಯಾವ ಕೆಲಸಕ್ಕೆ ಕೈಹಾಕಿದರೂ, ಅಥವಾ ತಲೆ ಹಾಕಿದರೂ ಅದರ ಹಿಂದೆ ಒಂದು ವಿಶ್ವಾಸ ಇದ್ದೇ ಇರುತ್ತದೆ. ಬೆಳಗ್ಗೆ ನಿದ್ದೆಯಿಂದ ಎಚ್ಚೆತ್ತಕ್ಷಣದಿಂದಲೂ ಮನುಷ್ಯನಿಗೆ ಅಡಿಗಡಿಗೂ ಅಗತ್ಯ ಕೆಲಸಗಳೇ ಬರುತ್ತವೆ. ಅಂಗಡಿಗೆ ಹೋಗಿ ಬೇಕಾದ ವಸ್ತುಗಳನ್ನು ತರಬೇಕು. ಏನೋ ಮೈ ಸರಿಯಿಲ್ಲದಿದ್ದರೆ ವೈದ್ಯರನ್ನು ಕರೆಯಬೇಕು, ಅಥವಾ ನೋಡಬೇಕು. ಮಕ್ಕಳಿಗೆ ಶಾಲೆಯಲ್ಲಿ ಪಾಠಗಳು ಸರಿಯಾಗಿ ಲಭಿಸಬೇಕು. ಹಾಲಿನಲ್ಲಿ ನೀರು ಬೆರೆಯಲಾರದೆಂದೂ, ಎಣ್ಣೆಯಲ್ಲಿ ಕಲಬೆರಿಕೇ ಇರಲಾರದೆಂದೂ, ವೈದ್ಯರು ರೋಗ ನಿದಾನವನ್ನು ಸರಿಯಾಗಿಯೇ ಮಾಡುವರೆಂದೂ, ಮಾರಾಟದ ಔಷಧಗಳಲ್ಲಿ ಮೋಸವಿರ ಲಾರದೆಂದೂ ನಂಬಿಕೊಂಡೇ ಜೀವನ ಯಾತ್ರೆ ಸಾಗಿಸಬೇಕಾಗಿದೆ. ಹಾಗೆಯೇ ಸಾಗುತ್ತಲೂ ಇದೆ. ಆದರೆ ಈ ವಿಶ್ವಾಸಗಳು ಯಾವಾಗಲೂ ನಿಜವಾಗಿರುವುದಿಲ್ಲ. ಹಣ ಸುರಿದು ಮನೆಗೆ ತಂದ ತುಪ್ಪ ಒಂದು ದಿನದೊಳಗೆ ದುರ್ವಾಸನೆ ಹೊಡೆಯು ತ್ತದೆ. ಶಾಲೆಯಲ್ಲಿ ಮಕ್ಕಳ ವಿದ್ಯೆ ಸರಿಯಾಗಿ ನಡೆಯಲಾರದು. ಇಂತಹ ಸಮಯಗಳಲ್ಲಿ ಹತ್ತು ಮಂದಿ ಸೇರಿ, ತಮ್ಮ ಅನುಭವಗಳನ್ನು ವ್ಯಕ್ತಪಡಿಸುವುದರ ಮೂಲಕ, ಯಾವ ಅಂಗಡಿಯಲ್ಲಿ ಒಳ್ಳೆಯ ಸರಕುಗಳಿವೆಯೆಂದೂ, ಯಾವ ವೈದ್ಯರು ರೋಗವನ್ನು ಬೇಗನೆ ಗುಣಪಡಿಸಬಲ್ಲರೆಂದೂ, ಯಾವ ಶಾಲೆಯಲ್ಲಿ ಹುಡುಗರ ವಿದ್ಯೆ ಚೆನ್ನಾಗಿ ಸಾಗುತ್ತದೆಂದೂ ತಿಳಿದು ಕೊಂಡು ಸಾಮೂಹಿಕ ವಿಶ್ವಾಸಗಳನ್ನು ಅವಲಂಬಿಸುತ್ತೇವೆ. ಅವರವರ ಪಾಡಿಗೆ, ಒಂದನ್ನು ನಂಬುವುದಕ್ಕಿಂತಲೂ, ಹತ್ತು ಮಂದಿ ಕೂಡಿ ನಂಬುವಂಥವು ಉಪಯೋಗಕರವಾದ ವಿಶ್ವಾಸಗಳೆನಿಸುತ್ತವೆ.

ಪದೇ ಪದೇ ನಿರೂಪಿಸಲ್ಪಟ್ಟ ವಿಶ್ವಾಸಗಳೇ ವಿಜ್ಞಾನವೆನಿಸಿಕೊಳ್ಳುತ್ತದೆ. ಇಂತಹ ಆಹಾರ ಪದಾರ್ಥಗಳಲ್ಲಿ ಪೋಷಕ ಪದಾರ್ಥಗಳಿವೆಯಾದುದರಿಂದ, ಅವನ್ನು ತಿಂದರೆ ಆರೋಗ್ಯಕ್ಕೆ ಒಳ್ಳೆಯದೆಂಬುದು ಅನೇಕ ಸಾರಿ ನಿರೂಪಿಸಲ್ಪಟ್ಟ ಮೇಲೆ, ಅದು ವಿಜ್ಞಾನಕ್ಕೆ ಸೇರಿಕೊಳ್ಳುವ ವಿಷಯವಾಗುತ್ತದೆ. ಹಾಗೆಯೇ ಕೆಲವು ರೋಗಗಳಿಗೆ ಕೆಲವು ಔಷಧಗಳನ್ನು ಉಪಯೋಗಿಸಿ ತೀರಬೇಕಾಗುತ್ತದೆ. ಇಂತಹ ಬೆಳೆಗಳಿಗೆ ತಗಲುವ ಕೀಟಗಳಿಗೆ ಮಾರಕವಾದುದು ಇಂತಹ ಮದ್ದು; ಇಂತಹ ಬೆಳೆಗಳಿಗೆ ಇಂತಹ ರಾಸಾಯನಿಕ ಗೊಬ್ಬರ ಉಪಯೋಗಿಸಬೇಕು.

ಈ ಬಗೆಯ ಅನುಭವಗಳು ಕಾಲಕಳೆದಂತೆ ಹೆಚ್ಚಾಗುತ್ತ, ವಿಶ್ವಾಸಗಳು ಬಲವಾಗುತ್ತ ವಿಜ್ಞಾನವಾಗಿ ಪರಿವರ್ತನೆ ಗೊಳ್ಳುತ್ತದೆ. ಅಂಥ ವಿಶ್ವಾಸಗಳ ಸ್ಥಾನದಲ್ಲಿ ವಿಜ್ಞಾನ ಬರುವುದೇ ಪ್ರಗತಿಯ ಲಕ್ಷಣ. ವಿಜ್ಞಾನವು ಲಭ್ಯವಾಗುತ್ತಿರುವಾಗ ಅದಕ್ಕೆ ವಿರುದ್ಧವಾದ ವಿಶ್ವಾಸಗಳಿರುವವರನ್ನು ಮೂಢರು ಅನ್ನುತ್ತೇವೆ. ಆದರೆ ಮಾನವರ ಅಗತ್ಯಗಳಿಗೆ ಸಾಲುವಷ್ಟು ವಿಜ್ಞಾನಕ್ಕೆ ತಲಪದ ಪರಿಸ್ಥಿತಿಯಲ್ಲಿ ವಿಶ್ವಾಸಗಳನ್ನು ಮಾತ್ರವೇ ಅವಲಂಬಿಸಿಕೊಂಡಿರಬೇಕಾಗುತ್ತದೆ. ದೇಶದ ಶ್ರೇಯಸ್ಸಿಗೇ ಆಧಾರವೆನಿಸುವ ಚುನಾವಣೆಯಂತಹ ಪರಿಸ್ಥಿತಿಯಲ್ಲಿ ವಿಜ್ಞಾನವು ಏನೂ ಕೆಲಸ ಮಾಡದಿರುವ ಕಾರಣದಿಂದ, ವಿಶ್ವಾಸ ಗಳನ್ನಷ್ಟೇ ಅನುಸರಿಸಬೇಕಾಗಿ ಬರುತ್ತದೆ.



# ಪವಿತ್ರಜಲ

ಹಿಂದೆ ಒಂದು ಕಾಲದಲ್ಲಿ ಗೋಪಾಲಪುರವೆಂಬ ಜಮೀನುದಾರಿ ಪ್ರಾಂತವಿದ್ದಿತು. ಅಲ್ಲಿಯ ಜಮೀನುದಾರನಾಗಿದ್ದ ರತ್ನಭೂಷಣನು ಒಮ್ಮೆ ತನ್ನ ಹೊಲ ಗದ್ದೆಗಳನ್ನು ನೋಡಿಕೊಳ್ಳಲು ಗ್ರಾಮಗಳ ಕಡೆಗೆ ಹೋದನು. ಒಂದು ಗ್ರಾಮದ ಹೊಲಗಳನ್ನು ಸಾಗುವಳಿ ಮಾಡುವವನು ರಾಮಯ್ಯನೆಂಬ ರೈತ. ಆ ಹೊಲಗಳಿಂದ ಬಂದ ಧಾನ್ಯಗಳಲ್ಲಿ ಜಮೀನುದಾರರಿಗೆ ಕೊಡಬೇಕಾದುದನ್ನು ರಾಮಯ್ಯನು ತನ್ನ ಮನೆಯ ಉಗ್ರಾಣದಲ್ಲಿ ರಾಶಿಮಾಡಿಟ್ಟಿರುತ್ತಾನೆ.

ರಾಮಯ್ಯನ ಮನೆಯ ಹತ್ತಿರವೇ ಜಮೀನುದಾರನು ಉಳಿದುಕೊಳ್ಳುವ ಮನೆಯಿದ್ದಿತು. ಆ ಮನೆಯಲ್ಲಿ ಬಂದಿಳಿದಿದ್ದ ಜಮೀನುದಾರನಿಗೆ ರಾಮಯ್ಯನ ಮಗಳು ಅಡಿಗೆ ಮಾಡಿ ಊಟ ಬಡಿಸುತ್ತಿದ್ದಳು. ಈ ಸಾರಿ ಬಂದ ಜಮೀನುದಾರನು ಶಾಂತಿಯನ್ನು ನೋಡಿ ಆಶ್ಚರ್ಯದಿಂದ ಕಣ್ಣರಳಿಸಿ ಕೊಂಡನು.

ಶಾಂತಿ ತುಂಬಾ ಚೆಲುವೆಯಾಗಿದ್ದಳು. ಇನ್ನೂ ಅವಳಿಗೆ ಮದುವೆಯಾಗಿರಲಿಲ್ಲ. ಇವಳನ್ನು ತಾನೇ ಮದುವೆ ಮಾಡಿಕೊಂಡು ಬಿಡಬೇಕೆಂಬುದು ರತ್ನಭೂಷಣನಿಗೆ ಬಲವಾದ ಆಶೆಯುಂಟಾಯಿತು. ತನ್ನ ಆಸೆಗೆ ರಾಮಯ್ಯನು ಸಂತೋಷದಿಂದ ಒಪ್ಪುವನೆಂದು ಕೊಂಡು ಆ ಸಂಗತಿಯನ್ನು ಅವನು ಸ್ಪಷ್ಟವಾಗಿ ರಾಮಯ್ಯನೊಂದಿಗೆ ಹೇಳಿದನು.

ಅದನ್ನು ಕೇಳಿ ರಾಮಯ್ಯ ಸ್ವಲ್ಪ ಹೊತ್ತು ಬೆಪ್ಪು ಬಡೆದಂತಾದನು. ಜಮೀನುದಾರನು ಆಗಲೇ ಎರಡು ಮಕ್ಕಳಿಗೆ ತಂದೆಯಾಗಿರುವವನು. ಇವನು ಹೀಗೆ ಕೇಳುವನೆಂದು ರಾಮಯ್ಯ ಊಹಿಸಿರಲಿಲ್ಲ. ಅವನು ತನ್ನ ಕಿವಿಯನ್ನೇ ನಂಬದೆ, "ನೀವು ಹೇಳುವುದು ನನಗೆ ಅರ್ಥವಾಗಿಲ್ಲ" ಎಂದನು.

"ಇದರಲ್ಲಿ ಅರ್ಥವಾಗಲಿಕ್ಕೇನಿದೆ ರಾಮಯ್ಯಾ? ನಿನ್ನ ಮಗಳು ಶಾಂತೀನ ನಾನು ಎರಡನೇ ಹೆಂಡತಿಯಾಗಿ ಮದುವೆ ಆಗ್ತೇನೆ ಅಂದೆ" ಎಂದ ರತ್ನಭೂಷಣ.

"ನಾನು ಬಡವನೆಂಬ ಸಸಾರದಲ್ಲಿ ನೀವು ಈ ಮಾತು ಹೇಳುವಿರಿ. ಇದೇನೂ ಚೆನ್ನಾಗಿಲ್ಲ ಸ್ವಾಮಿ. ಈ ವಿಚಾರ ಇಷ್ಟಕ್ಕೇ ಬಿಟ್ಟುಬಿಡಿ!" ಎಂದು ರಾಮಯ್ಯ ಸ್ವಲ್ಪವೂ ಹೆದರದೆ ಕಡ್ಡಿ ಮುರಿದ ಹಾಗೆ ಹೇಳಿಬಿಟ್ಟನು.

ವಿ. ಎಸ್. ನಾರಾಯಣ



ಜಮೀನುದಾರನಲ್ಲಿ ಅಹಂಕಾರವು ತಿವಿಯುವಂತೆ ಮೇಲೆದ್ದಿತು. ತನ್ನಂಥವನಿಗೆ ಎರಡನೇ ಹೆಂಡತಿಯಾಗಿ ಮಗಳನ್ನು ಕೊಡಲಿಕ್ಕೆ ಯಾರೂ ಅಭ್ಯಂತರ ಹೇಳಲಾರರು. ಈ ರಾಮಯ್ಯನಿಗೆ ಕೆಟ್ಟ ಪೊಗರು ಬಂದಿದೆ. ಇವನನ್ನೇನು ಕೇಳುವುದು ?

ರತ್ನಭೂಷಣನು ಶಾಂತಿ ಒಬ್ಬಳೇ ಇರುವ ಹೊತ್ತು ನೋಡಿ ಅವಳೊಂದಿಗೆ ತನ್ನ ಕೋರಿಕೆಯನ್ನು ಹೇಳಿದನು. ಅವನ್ನು ಕೇಳಿ ಶಾಂತಿ ಹೆದರಿದಳು. ರತ್ನಭೂಷಣನು ಅವಳು ಓಡದಂತೆ ಕೈ ಹಿಡಿಯಲು ನೋಡುವಾಗ, "ಶಾಂತೀ !" ಎಂದು ಕರೆಯುತ್ತ ಒಬ್ಬ ಯುವಕನು ಅಲ್ಲಿಗೆ ಬಂದನು.

ಶಾಂತಿ ಅವನನ್ನು ನೋಡಿ ಧೈರ್ಯದಿಂದ ಹಸನ್ಮುಖಿಳಾಗಿ, "ಯಾವಾಗ ಬಂದಿರಿ ಬಾವಯ್ಯ ? ಬನ್ನಿ ಬನ್ನಿ!" ಎಂದಳು.

ಜಮೀನುದಾರ ರತ್ನಭೂಷಣನು ಪ್ರಶ್ನಾರ್ಥಕವಾಗಿ ನೋಡುವುದನ್ನು ಗಮನಿಸಿ, ಶಾಂತಿ, "ಇವರು ನನ್ನ ಮಾವನ ಮಗ ಬಾವ. ನಗರದಲ್ಲಿ ಓದಿಕೊಳ್ಳುತ್ತಿದ್ದಾರೆ. ಮಾಧವರಾವು ಅಂತ ಇವರ ಹೆಸರು. ಇವರು ಕೂಡಾ ಈ ಊರಲ್ಲಿರುವವರೇ!" ಎಂದಳು.

ರತ್ನಭೂಷಣನು ಮಾಧವರಾವನ್ನು ನೋಡುತ್ತಾ ಹೊರಟು ತನ್ನ ಬಿಡದಿಗೆ ಹೋದನು.

ಶಾಂತಿಯನ್ನು ಮಾಧವರಾವಿಗೆ ಕೊಟ್ಟು ಮದುವೆ ಮಾಡುವುದೆಂಬ ಮಾತು ಈ ಮೊದಲೇ ನಿಶ್ಚಯವಾಗಿತ್ತು. ಚಿಕ್ಕ ಪ್ರಾಯದಲ್ಲಿಯೇ ತಾಯಿಯನ್ನು ಕಳೆದುಕೊಂಡ ಶಾಂತಿ, ಅವಳಿಗೆ ತಕ್ಕವನಾದ ತನ್ನ ತಂಗಿಯ ಮಗನ ಮಡದಿಯಾದರೆ ಸುಖಪಡುವಳೆಂದು ರಾಮಯ್ಯನ ಉದ್ದೇಶವಾಗಿತ್ತು.

ಆ ದಿನ ಸಾಯಂಕಾಲ ದೀಪ ಹಚ್ಚಿದ ಮೇಲೆ ರತ್ನಭೂಷಣನು, ಶಾಂತಿ ಒಬ್ಬಳೇ ಮನೆಯಲ್ಲಿದ್ದಾಗ ಬಂದನು. ತನ್ನನ್ನು ಮದುವೆಯಾಗಲು ಒಪ್ಪಿಬಿಡುವಂತೆ ಒತ್ತಾಯಪಡಿಸಿದಾಗ, ಶಾಂತಿ ಅವನ ಕೈಗೆ ಸಿಗದೆ ತಪ್ಪಿಸಿಕೊಂಡು ಓಡಿಹೋದಳು. ರತ್ನಭೂಷಣನಿಗೆ ಭಾರಿ ಕೋಪ ಬಂದಿತು. ಅವನು ಬಲವಾಗಿ ಕಾಲು ಜಾಡಿಸಿ ದೀಪವನ್ನು ಒದ್ದು ತನ್ನ ಬಿಡದಿಗೆ ಹೋಗಿಬಿಟ್ಟನು.

ಆಗ ಹೊರಳಿದ ದೀಪದ ಎಣ್ಣೆ ಚೆಲ್ಲಿ, ದೀಪವು ಬೆಂಕಿಯಾಗಿ ಉರಿಯ ತೊಡಗಿ, ಕ್ಷಣಮಾತ್ರದಲ್ಲಿ ದೊಡ್ಡದಾಗಿ ಮನೆ ಪೂರಾ ಹತ್ತಿಕೊಂಡು ಮಹಾ ಜ್ವಾಲೆಯಾಯಿತು. ಸುತ್ತುಮುತ್ತಲಿನವರೆಲ್ಲಾ ಓಡಿ ಬಂದು ಹೇಗೆ ಹೋಗೋಮಾಡಿ ಬೆಂಕಿಯನ್ನು ಆರಿಸಿದರು.

ಈ ಬೆಂಕಿ ಅನಾಹುತವು ಹೇಗಾಯಿತೆಂದು ಶಾಂತಿ ರಾಮಯ್ಯನಿಗೂ ಮಾಧವರಾವಿಗೂ ಹೇಳಿದಳು. ಅಷ್ಟರಲ್ಲಿ ರತ್ನಭೂಷಣ ಜಮೀನುದಾರನು ಗ್ರಾಮ ಪಂಚಾಯಿತಿಯನ್ನು ಸಮಾವೇಶಗೊಳಿಸಿ, ರಾಮಯ್ಯನ ಮನೆಯಲ್ಲಿ ಭದ್ರಪಡಿಸಲ್ಪಟ್ಟಿದ್ದ ತನ್ನ ಧಾನ್ಯಗಳಷ್ಟೂ

ಸುಟ್ಟುಹೋದುದಕ್ಕೆ ರಾಮಯ್ಯನ ಮೇಲೆ ವ್ಯಾಜ್ಯ ಮಾಡುವುದಾಗಿ ಹೇಳಿದನು.

ಪಂಚಾಯಿತೀ ಹಿರಿಯರು ಬೆರಗಾಗಿ, "ನಿಮ್ಮ ಧಾನ್ಯಗಳೊಂದಿಗೆ ರಾಮಯ್ಯನ ಮನೆ ಕೂಡಾ ಸುಟ್ಟು ಹೋಗಿದೆ. ನಿಮ್ಮ ಧಾನ್ಯವನ್ನು ಅವನು ಎಲ್ಲಿಂದ ತಂದು ಕೊಡುವನು? ಅದರ ವಿಷಯವನ್ನು ನೀವು ಮಾಫಿ ಮಾಡಿ ಮರೆತರೇನೇ ಒಳ್ಳೇದೆಂಬುದು ನಮ್ಮ ಅಭಿಪ್ರಾಯ." ಎಂದರು.

"ನನ್ನ ಸಾವಿರಾರು ರೂಪಾಯಿಯ ಬೆಳೆ ನಷ್ಟವಾದರೆ ಹೇಗೆ ಸುಮ್ಮನಿರಲು ಸಾಧ್ಯ? ನನ್ನ ಬೆಳೆಯ ನಷ್ಟವನ್ನು ಕೊಡುವ ಬಾಧ್ಯತೆ ರಾಮಯ್ಯನ ಮೇಲೆ ಇದ್ದೇ ಇದೆ!" ಎಂದ ರತ್ನಭೂಷಣ.

ಗ್ರಾಮದ ಹಿರಿಯರು ರಾಮಯ್ಯನನ್ನು ಕರೆಯಿಸಿದರು. ಅಲ್ಲಿಗೆ ಹೊರಡುವ ಮೊದಲು ರಾಮಯ್ಯನು ಶಾಂತಿಯ ಕೈಯನ್ನು ಮಾಧವರಾವಿನ ಕೈಯಲ್ಲಿಟ್ಟು, "ನೋಡಪ್ಪಾ, ಶಾಂತಿಗಾಗಿಯೇ ಈ ಜಮೀನ್ದಾರನು ಈ ಉಪಾಯ ಮಾಡಿದ್ದಾನೆ. ನನ್ನ ಗತಿ ಏನಾದರೂ ಚಿಂತಿಲ್ಲ. ಶಾಂತಿಯನ್ನು ಮಾತ್ರ ಜಾಗರೂಕತೆಯಿಂದ ನೋಡಿಕೋ." ಎಂದನು.

"ಮಾವಯ್ಯಾ! ನೀವು ಪಂಚಾಯಿತಿಗೆ ಹೋಗಿ. ನಾವು ಕೂಡಾ ನಿಮ್ಮ ಹಿಂದೆಯೇ ಬರುತ್ತೇವೆ. ಅವರೆಲ್ಲ ಏನು ಮಾಡುವರೆಂದು ನಮಗೂ ಗೊತ್ತಾಗಲಿ" ಎಂದನು ಮಾಧವರಾವು.

"ಬೇಡ ಬೇಡ. ಆ ಜಮೀನ್ದಾರನೆಂದರೆ ಬೆಂಕಿ ಹಿಡಿದ ಕೊಲಿನ ಕೆಂಡ. ಬೂದಿ ಮುಚ್ಚಿದ ಹಾಗಿದೆ. ಥಕ್ಕನೆ ಸುಟ್ಟೀತು. ನಿಮಗೇಕೆ ಅದರ ಬಿಸಿ?" ಎಂದು ಹೇಳಿ ರಾಮಯ್ಯ ಅಲ್ಲಿಗೆ ಹೋದನು.

ರಾಮಯ್ಯ ಹೇಳಿದ ಕಡೆಯ ಮಾತಿನಿಂದ ಮಾಧವರಾವಿಗೆ ಒಂದು ಆಲೋಚನೆ ಬಂತು. ಅವನು ನಗರದಲ್ಲಿ ರಸಾಯನ ಶಾಸ್ತ್ರವನ್ನು ಕಲಿಯುತ್ತಿದ್ದನು. ಅಂತಹದೊಂದು ಪ್ರಯೋಗದಿಂದ ಜಮೀನುದಾರನ



ಗಂಡಾಂತರದಿಂದ ರಾಮಯ್ಯನನ್ನು ಕಾಪಾಡಬಹುದೆಂದು ಅವನಿಗೆ ತೋರಿತು. ಕೂಡಲೇ ಅವನು ಮಾಡಬೇಕಾದ ಪ್ರಯೋಗಕ್ಕೆ ಅಗತ್ಯವಿದ್ದ ಪರಿಕರಗಳನ್ನು ತೆಗೆದುಕೊಂಡು. ಶಾಂತಿಯೊಂದಿಗೆ ಪಂಚಾಯಿತೀ ನಡೆಯುವ ಸ್ಥಳಕ್ಕೆ ಹೋದನು.

ಅವರು ಅಲ್ಲಿಗೆ ಹೋಗಿ ಸೇರಿದಾಗ, ಬೇರೊಂದು ವಿಧವಾಗಿ ಪಂಚಾಯಿತೀ ಮುಖವು ತಿರಗಿತ್ತು. ರತ್ನಭೂಷಣನು ದಯಾವಂತನಾಗಿ ಶಾಂತಿಯನ್ನು ತನಗೆ ಕೊಟ್ಟು ಮದುವೆ ಮಾಡುವುದಾದರೆ, ರಾಮಯ್ಯನ ಮೇಲೆ ತಾನು ವ್ಯಾಜ್ಯ ಮಾಡುವುದಿಲ್ಲವೆಂದೂ, ಅವನಿಗೆ ಮನೆಯನ್ನು ಸಹಾ ತನ್ನ ಖರ್ಚಿನಲ್ಲೇ ಕಟ್ಟಿಸುವೆನೆಂದೂ ಹೇಳುತ್ತಿದ್ದನು.

ಆಗ ಮಾಧವರಾವ್ ಹೋಗಿ ಪಂಚಾಯಿತಿ ಸಭ್ಯರಿಗೆ ನಮಸ್ಕರಿಸಿ, "ಒಂದು ಸಾರಿ ಶಾಂತಿ ಹೇಳುವ ಮಾತು ಕೂಡಾ ಕೇಳಿರಿ" ಎಂದನು. ಶಾಂತಿ ನಡೆದ ನಿಜ ಸಂಗತಿಯನ್ನು ಹೇಳಿದಳು.

ರತ್ನಭೂಷಣನು ಅದು ಸುಳ್ಳೆಂದು ಹೇಳುತ್ತ, "ಬೆಳೆಯನ್ನು ಬೇರೆಲ್ಲಿಯೋ ಅಡಗಿಸಿ, ಮನೆ ಸುಟ್ಟು ಹೋದಂತೆ ಈ ಅಣ್ಣಾ ತಂಗಿಯರು ಬೇಕಂತ ಮನೆ ಸುಟ್ಟಿದ್ದಾರೆ. ಮನೆಯ ಬೆಲೆಯು ಇಮ್ಮಡಿ ಯಷ್ಟು ಧಾನ್ಯವಿತ್ತು" ಎಂದನು.

ಮಾಧವರಾವ್ ಹಿರಿಯರನ್ನು ನೋಡಿ, "ಹಾಗಾದರೆ ನಿಜವು ಹೀಗೆಲ್ಲಾ ಹೊರಬೀಳದು. ಬೆಂಕಿಗೆ ಕಾರಣರಾದವರು ಮೂವರಲ್ಲಿ ಯಾರೆಂಬು ದನ್ನು ತಿಳಿಯಲು ದೇವರ ಮೇಲೆ ಭಾರ ಹಾಕೋಣ. ಮೂವರ ಹೆಸರನ್ನೂ ಮೂರು ಕಾಗದದಲ್ಲಿ ಬರೆದು ಅದರ ಮೇಲೆ ದೇವರ ಅಭಿಷೇಕ ತೀರ್ಥವನ್ನು ಹಾಕಿದರೆ ಯಾರು ತಪ್ಪು ಮಾಡಿದರೆಂದು ಗೊತ್ತಾಗ ದಿರದು! ನನಗೆ ಇದರಲ್ಲಿ ಗಟ್ಟಿ ನಂಬುಗೆಯಿದೆ. ನಿಮಗೆಲ್ಲಾ ಇದೆಯೋ? ಎಂದನು.

ಆ ರೀತಿಯಾಗಿ ತಪ್ಪು ಬಯಲಾಗುವುದೆಂದು ಯಾರಿಗೂ ನಂಬುಗೆಯಾಗಲಿಲ್ಲ. ಆದ್ದರಿಂದ ಅವನ ನಂಬುಗೆ ಕೆಡಿಸುವುದೇಕೆಂದು ಎಲ್ಲರೂ ಒಪ್ಪಿದರು. ಜಮೀನುದಾರನೂ ಸಹ ಇದೊಂದು ಆಟ ಅಂದು ಕೊಂಡು ಹಾಗೆ ಮಾಡಲು ಒಪ್ಪಿಗೆ ಕೊಟ್ಟನು.

ಮಾಧವರಾವು ಬೇಗನೇ ಹೋಗಿ ದೇವಾಲಯದ ಅಭಿಷೇಕ ತೀರ್ಥವನ್ನು ತಂದನು. ತರುವಾಯ ಮೂರು ಕಾಗದಚೂರುಗಳಲ್ಲಿ ಮೂವರ ಹೆಸರನ್ನೂ ಬರೆದನು. ಗ್ರಾಮದ ಹಿರಿಯನೊಬ್ಬ ಮೂರು ಕಾಗದಗಳ ಮೇಲೆಯೂ ಉದ್ಧರಿಣಿಯಿಂದ ಅಭಿಷೇಕ ತೀರ್ಥವನ್ನು ಹಾಕಿದನು. ಆಗ ಅದ್ಭುತವೆನ್ನುವಂತೆ ರತ್ನಭೂಷಣನ ಹೆಸರಿನ ಕಾಗದದ ತುಂಡು ಭಗ್ಗನೆ ಉರಿಯಿತು.

ಎಲ್ಲರೂ ಹಾಹಾಕಾರ ಮಾಡಿದರು. ರತ್ನಭೂಷ ಣನು ಗಾಬರಿಯಾದನು. ಹಿರಿಯರು ಒತ್ತಾಯಿಸಿ ಕೇಳಿದಾಗ, ತನ್ನಿಂದಲೇ ಮನೆ ಸುಟ್ಟಿತೆಂದು ಅವನು ಒಪ್ಪಿದನು. ಪಂಚಾಯಿತೀದಾರರು ಅವನಿಂದ ರಾಮಯ್ಯನಿಗೆ ನಷ್ಟಪರಿಹಾರಕೊಡಿಸಿದರು. ಆ ಹಣದಿಂದ ಶಾಂತೀಮಾಧವರಾವುಗಳ ಮದುವೆ ಚೆಂದಾಗಿ ನಡೆಯಿತು.

ಆ ಮೇಲೆ ಶಾಂತಿ ತನ್ನ ಗಂಡನ ಹತ್ತಿರ, "ಆ ಜಮೀನುದಾರನ ಹೆಸರಿನ ಕಾಗದ ಮಾತ್ರ ಹೇಗೆ ಉರಿಯಿತು?" ಎಂದು ಕೇಳಿದಳು.

"ಸಕ್ಕರೆಯನ್ನೂ ಮರದುಪ್ಪನ್ನೂ ಬೆರೆಸಿ ಹಚ್ಚಿದ ಕಾಗದದಲ್ಲಿ ಜಮೀನುದಾರನ ಹೆಸರು ಬರೆದೆ. ಅಭಿಷೇಕ ತೀರ್ಥ ಗಂಧಕಾಮ್ಲ ಬೆರೆಸಿದ್ದು. ಆ ಆಮ್ಲವು ಆ ಕಾಗದಕ್ಕೆ ಮುಟ್ಟಿದಕೂಡಲೇ ಅದು ಉರಿಯಿತು. ಉಳಿದೆರಡು ಕಾಗದಗಳು ಸಾದಾಕಾಗದ ಗಳೇ ಆದ್ದರಿಂದ ಅವು ಉರಿಯಲಿಲ್ಲ" ಎಂದನು ಮಾಧವರಾವು.






## ೬

[ಚತುರ್ನೇತ್ರನೂ ಸಮರಸೇನನೂ ಮಾತಾಡಿಕೊಂಡಿರುವಾಗ, ಪೊದರಿನ ಮರೆಯಲ್ಲಿ ಹೊಂಚಿ ಕೇಳುತ್ತಿದ್ದ ಆಟವಿಕರನ್ನು ಕರಿಗೂಗೆಯೂ ನರವಾನರವೂ ಓಡಿಸಿ ಬಿಟ್ಟುವು. ಚತುರ್ನೇತ್ರನು ಸಮರಸೇನನಿಗೆ ಧನರಾಶಿಯ ನಾವೆಯ ವೃತ್ತಾಂತವನ್ನು ಹೇಳ ತೊಡಗಿದನು. ಶಾಕ್ತೇಯನೊಬ್ಬನಿಗೆ ಚಂಡೀದೇವಿ ಪ್ರತ್ಯಕ್ಷಳಾಗಿ, ತನಗೆ ಬೆಳ್ಳಿ ಬಂಗಾರದ ಆಲಯವನ್ನು ಕಟ್ಟಿಸಿ ಕೊಡಲು ಕೇಳಿಕೊಂಡಳಂತೆ.]

**ಶ**ಮನದ್ವೀಪದ ರಾಜನಾದ ಮಹಾ ಚಂಡೀಭಕ್ತ ಶಾಕ್ತೇಯನನ್ನು ಕುರಿತು ಚತುರ್ನೇತ್ರನು ಹೇಳುತ್ತಿದ್ದ ಅದ್ಭುತ ವೃತ್ತಾಂತವನ್ನು ಕೇಳಿ ಸಮರಸೇನನಿಗೆ ತುಂಬಾ ಕುತೂಹಲವೆದ್ದಿತು. ಚಂಡೀ ಮಹಾದೇವಿ ತನಗೆ ಆಲಯವನ್ನು ಕಟ್ಟಿಸುವಂತೆ ಕೇಳಿಕೊಂಡರೆ ಆಶ್ಚರ್ಯವೇನಿಲ್ಲ. ಆದರೆ ಕಲ್ಲುಮಣ್ಣುಗಳಿಗೆ ಬದಲಾಗಿ ಪೂರ್ತಿ ಬೆಳ್ಳಿ ಬಂಗಾರಗಳಿಂದಲೇ ಕಟ್ಟಿಸಬೇಕೆಂದು ಅವಳು ಪ್ರತ್ಯೇಕವಾಗಿ ಕೇಳುವುದೆಂದರೆ ಬಹಳ ವಿಚಿತ್ರವೇ ಸರಿ. ಒಂದು ದೇವಾಲಯವನ್ನು ಪೂರ್ತಿ ಚಿನ್ನದಿಂದ ಕಟ್ಟಲು ಮಾನವಮಾತ್ರರಿಂದ ಸಾಧ್ಯವಾಗುವುದುಂಟೆ? "ಅಲ್ಲಯ್ಯಾ ಚತುರ್ನೇತ್ರಾ, ತನ್ನ ಪ್ರೀತಿಯ ಭಕ್ತನನ್ನು ಚಂಡೀದೇವಿ ದುಸ್ಸಾಧ್ಯವಾದ ಕೆಲಸಕ್ಕೆ ಪ್ರೇರೇಪಿಸುವುದೆಂದರೆ ಅತ್ಯಾಶ್ಚರ್ಯವಾಗಿದೆ. ಬಹುಃಶ ಆ ಶಾಕ್ತೇಯನು ದೇವಿಗೆ ಏನೋ ತಪ್ಪು ಮಾಡಿರಬೇಕು, ಹೌದಾ?" ಎಂದನು ಸಮರಸೇನ.

ಚತುರ್ನೇತ್ರನು ತಲೆಯಾಡಿಸಿ ಗಟ್ಟಿಯಾಗಿ ನಕ್ಕು, "ಸಮರಸೇನಾ, ಅಂಥಾದ್ದೇನೂ ಇಲ್ಲ. ಅಸಲು ನಿನಗೆ ಶಕ್ತಿಯ ಉಪಾಸನೆಯ ತತ್ವವು ತಿಳಿಯದುದರಿಂದಲೇ ಹೀಗೆ ಸಂದೇಹಪಡುತ್ತೀ.




ಅದೇ. ಆ ಧನರಾಶಿಗಳಿಂದ ತುಂಬಿದ ನಾವೆ ಹಾಗು, ಅದನ್ನು ಕಾವಲು ಕಾಯುವ ನಾಗಕನ್ನೆಯ ವೃತ್ತಾಂತವೆಲ್ಲವೂ ಇದರಲ್ಲೇ ತುಂಬಿದೆ. ನಾನೂ ಏಕಾಕ್ಷಿ ಮಾಂತ್ರಿಕನೂ ಇಷ್ಟೊಂದು ಬದ್ಧಶತ್ರುಗಳಾಗಿರಲು ಕಾರಣ ಕೂಡಾ ಈ ವೃತ್ತಾಂತದಿಂದ ನಿನಗೆ ತಿಳಿಯುತ್ತದೆ. ಇವೆಲ್ಲದಕ್ಕೂ ಮೂಲ ಚಂಡೀದೇವಿಯ ಅಪೇಕ್ಷೆಯೂ ಅದನ್ನು ನೆರವೇರಿಸಲು ಶಾಕ್ತೇಯನು ಸಿದ್ಧನಾದುದೂ ಆಗಿದೆ" ಎಂದು ಚತುರ್ನೇತ್ರನು ಮುಂದುವರಿಸಿ ಹೇಳಿದನು :

ಶಾಕ್ತೇಯನು ಚಂಡೀದೇವಿಯ ಕೋರಿಕೆಯನ್ನು ನೆರವೇರಿಸಬೇಕೆಂದು ನಿಶ್ಚಯಿಸಿಕೊಂಡನು. ನಿಜ ಹೇಳುವುದಾದರೆ ಅದನ್ನು ದೇವಿಯ ಕೋರಿಕೆ ಎನ್ನುವುದಕ್ಕಿಂತಲೂ ಆಜ್ಞೆ ಎಂದೇ ತಿಳಿಯಬೇಕು. ಅಂತಹ ಭಾವನೆಯಿಂದ ಕೂಡಿದ ಶಾಕ್ತೇಯನು, ಬೆಳ್ಳಿ ಬಂಗಾರಗಳನ್ನು ಸಂಪಾದಿಸಬೇಕಾದರೆ ನಿಮ್ಮ ಹಾಗೆಯೇ ಬೇರೆ ಬೇರೆ ರಾಜ್ಯಗಳ ಮೇಲೆ ದಂಡಯಾತ್ರೆ ಹೋಗಬೇಕೇಹೊರತು ಬೇರೆ ದಾರಿ ಇಲ್ಲವಷ್ಟೆ ?

ಶಮನದ್ವೀಪದಲ್ಲಿ ಹೆಚ್ಚು ಸೈನಿಕರಿರಲಿಲ್ಲ. ಅದಕ್ಕಾಗಿ ಅವನು ದೇಶದ ನಾಲ್ಕು ಮೂಲೆಗಳಲ್ಲಿಯೂ ಸೈನಿಕರಿಗೆ ತಕ್ಕ ಆಳುಗಳನ್ನು ಶೋಧಿಸತೊಡಗಿದನು. ಒಳ್ಳೆಯ ದೇಹಶಕ್ತಿಯೂ, ಆರೋಗ್ಯವೂ, ಧೈರ್ಯಸಾಹಸಗಳೂ ಇರುವ ಯುವಕರನ್ನು ಆರಿಸಿ ಸೈನ್ಯದಲ್ಲಿ ಸೇರಿಸಿಕೊಳ್ಳಲು ಪ್ರಾರಂಭಿಸಿದನು. ಒಂದೊಂದು ಗ್ರಾಮಕ್ಕೂ ಹೋಗಿ, ಅಲ್ಲಿರುವ ಯುವಕರನ್ನೆಲ್ಲಾ ಒಂದೆಡೆಯಲ್ಲಿ ಕೂಡಿಸಿ ಮಲ್ಲಯುದ್ಧದಲ್ಲಿ, ಕತ್ತಿ ಕಾಳಗದಲ್ಲಿ, ದೊಣ್ಣೆ ಬೀಸುವುದರಲ್ಲಿ, ಬಾಣಬಿಡುವುದರಲ್ಲಿ ಸ್ಪರ್ಧೆಗಳನ್ನಿಟ್ಟು, ಅವುಗಳಲ್ಲಿ ಗೆದ್ದವರನ್ನು ಮಾತ್ರ ಸೈನಿಕರಾಗಿ ಸ್ವೀಕರಿಸುತ್ತಿದ್ದನು. ಚಂಡೀದೇವಿಯ ಮಹಾಭಕ್ತನಾದ ಶಾಕ್ತೇಯನು ಈ ರೀತಿಯಾಗಿ ಸೈನಿಕ

ಇಹ ಲೋಕದ ಸುಖಗಳನ್ನೂ, ಸಹಮಾನವರ ಮೇಲೆ ಅಧಿಕಾರವನ್ನೂ ಬಯಸುವವರಿಗೆ ಇಂತಹ ಶಕ್ತಿಯ ಉಪಾಸನೆ ಬೇಕಾಗುತ್ತದೆ. ಅಂತಹ ಶಕ್ತಿಗಳನ್ನು ಪಡೆಯಲಿಕ್ಕಾಗಿಯೇ ಶಾಕ್ತೇಯ ರಾಜನು ಚಂಡೀದೇವಿಯನ್ನು ಉಪಾಸಿಸಿದನು. ದೇವಿ ಕರುಣೆ ತೋರಿಸಿ ಆ ಶಕ್ತಿಗಳನ್ನು ಪ್ರಸಾದಿಸುವ ಮೊದಲು, ಅವನ ಧೈರ್ಯ ಸಾಹಸಗಳನ್ನು ಮಾತ್ರವಲ್ಲದೆ ತನ್ನ ಮೇಲೆ ಅವನಿಗೆ ಭಕ್ತಿ ಶ್ರದ್ಧೆಗಳು ಎಷ್ಟಿವೆ ಎಂಬುದನ್ನು ಕೂಡಾ ಪರೀಕ್ಷಿಸುತ್ತಾಳೆ. ಚಂಡೀದೇವಿ ಅಂತಹ ಪರೀಕ್ಷೆಗಾಗಿಯೇ ಆ ರೀತಿಯಾಗಿ ತೋರಿಸಿಕೊಂಡಿದ್ದಾಳೆ" ಎಂದನು.

"ಓಹೋ ! ಅಸಾಧಾರಣ ಪರೀಕ್ಷೆಯೇ ಸರಿ ! ಹಾಗಾದರೆ ಶಾಕ್ತೇಯನು ಅಷ್ಟೊಂದು ಬೆಳ್ಳಿ ಬಂಗಾರಗಳನ್ನು ಸಾಧಿಸಿಬಿಟ್ಟನೇನು ? ಆ ನಾವೆ ಅವನದೇನಾ ?" ಎಂದು ಕೇಳಿದನು ಸಮರಸೇನ. "ಈಗ ನಾನು ಹೇಳಲಿರುವ ಅದ್ಭುತ ಕಥೆ

ರನ್ನು ಸಮಾವೇಶಗೊಳಿಸಿಕೊಂಡಿದ್ದ ಕಾಲದಲ್ಲಿ ನಾನು ಇಪ್ಪತ್ತು ವರ್ಷ ಪ್ರಾಯದ ಯುವಕನಾಗಿದ್ದೆ. ನನ್ನ ಹಳ್ಳಿಯಲ್ಲೇ ಹುಟ್ಟಿದವನಾದ ಏಕಾಕ್ಷಿ ಕೂಡಾ ನನ್ನ ವಯಸ್ಸಿನವನೇ ಆಗಿದ್ದನು. ನಾವಿಬ್ಬರೂ ಒಂದೇ ಹಳ್ಳಿಯಲ್ಲಿ ಬೆಳೆದವರು.

ಆದರೆ ಬಾಲ್ಯದಿಂದಲೇ ಅವನಿಗೂ ನನಗೂ ಹಗೆತನವು ಬರುವಂತಹ ಘಟನೆಗಳು ನಡೆಯುತ್ತಿದ್ದುವು. ಸಣ್ಣ ಪುಟ್ಟ ಘಟನೆಗಳಿಗೆಲ್ಲ ಅವನು ನನ್ನ ಸ್ಪರ್ಧಾಳಾಗಿದ್ದನು. ಆ ಕಾಲದಲ್ಲಿ ಉಂಟಾದ ನಮ್ಮೊಳಗಿನ ಶತ್ರುಭಾವನೆಯೇ ಅನೇಕ ದುಶ್ಚರ್ಯೆಗಳಿಗೆ ದಾರಿಯಾಗಿ, ಕಡೆಗೆ ಈ ದ್ವೀಪವು ಮಾನವರ ವಾಸಕ್ಕೆ ಯೋಗ್ಯವಲ್ಲದಂತೆ ಮಾಡಿತು. ಆ ಕಾಲದಲ್ಲಿ ಏಕಾಕ್ಷಿ ನಿಜಕ್ಕೂ ಏಕಾಕ್ಷಿಯಾಗಿರಲಿಲ್ಲ. ಈ ದ್ವೀಪವನ್ನು ಸೇರಿದ ಮೇಲೆಯೇ ನನ್ನ ಬಂಟ ಉಲೂಕನಿಂದ ಅವನಿಗೆ ಏಕಾಕ್ಷಿತನ ಪ್ರಾಪ್ತವಾಗಿದೆ.

ಏಕಾಕ್ಷಿಯೂ ನಾನೂ ಒಂದೇ ಹಳ್ಳಿಯಲ್ಲಿ ಹುಟ್ಟಿದವರೆಂದು ಹೇಳಿದೆನಷ್ಟೆ ? ಅಲ್ಲಿ ನಮ್ಮಿಬ್ಬರ ಮನೆಗಳೂ ನೆರೆಹೊರೆಗಳಲ್ಲೇ ಇದ್ದುವು. ಮೊದಲಿನಿಂದಲೂ ನಮ್ಮೊಳಗೆ ಸ್ನೇಹಭಾವಕ್ಕಿಂತ ಶತ್ರುಭಾವವೇ ಇರಲು ನೆರೆಹೊರೆಗಳ ಮೇಲಾಟವೂ ಒಂದು ಕಾರಣವನ್ನು. ಆದರೆ ಅದು ತೀವ್ರದಶೆಗೆ ತಲಪಲು ಬಹಳ ಕಾಲ ಹಿಡಿಯಿತು.

ನಾನೂ ಏಕಾಕ್ಷಿಯೂ ನಮ್ಮ ಆರನೇ ವಯಸ್ಸಿನಿಂದ ದನಗಾಹಿಗಳಾಗಿ ಜೀವನವನ್ನು ಪ್ರಾರಂಭಿಸಿದೆವು. ನಮ್ಮ ಹಳ್ಳಿಯ ಹಿರಿಯನಾದ ಪತಂಗನ ಮೇಕೆಗಳನ್ನು ಅಡವಿಗಳಲ್ಲಿ ಮೇಯಿಸಿಕೊಂಡು ಬರುವುದು ನಮ್ಮ ವೃತ್ತಿಯಾಗಿತ್ತು. ಆಗ ನಾವು ಬಹಳ ಚಿಕ್ಕವರಾದುದರಿಂದ ಅಡವಿಯಲ್ಲಿ ಬೇಟೆಯಾಡುವ ಅರ್ಹತೆ ನಮಗೆ ಬಂದಿರಲಿಲ್ಲ. ವಯಸ್ಸು ಬಂದ ದೃಢಕಾಯರಾದವರು ಮಾತ್ರವೇ ಬೇಟೆಯಾಡಲು ಹೋಗುತ್ತಿದ್ದರು.

ಒಂದುದಿನ ನಾನೂ ಏಕಾಕ್ಷಿಯೂ ಮತ್ತೆ ಕೆಲವರು ಹುಡುಗರೂ ಮೇಕೆಗಳನ್ನು ಅಡವಿಗೆ ಹೊಡೆದುಕೊಂಡು ಹೋದೆವು. ಆ ಪ್ರಾಂತವೆಲ್ಲ






ಮರಗಿಡಗಳಿಂದ ದಟ್ಟವಾಗಿ ಕಿಕ್ಕಿರಿಸಿಕೊಂಡಿದ್ದಿತು. ಅಲ್ಲಿ ಹುಲಿ ಸಿಂಹಗಳು ಅಡಗಿಕೊಂಡಿರುತ್ತವೆ. ಪಶುಗಳನ್ನು ಮೇಯಿಸುವ ಹುಲುಸಾದ ಹುಲ್ಲು ಗಾವಲು ಅದರ ಪಕ್ಕದಲ್ಲೆಲ್ಲಾ ಹರಡಿದೆ. ನಡು ನಡುವೆ ಭಯಂಕರವಾದ ಕಾಡು.

ನಮ್ಮ ಮೇಕೆಗಳು ದೂರದ ಹುಲ್ಲುಗಾವಲಲ್ಲಿ ಮೇಯುತ್ತಿರಲು, ಕಾವಲಿಗರಾದ ನಾವೆಲ್ಲಾ ಒಂದು ಮರದ ಕೆಳಗೆ ಕುಳಿತಿದ್ದೆವು. ಇದ್ದಕ್ಕಿದ್ದ ಹಾಗೆ ಒಂದು ಸುಂದರವಾದ ಜಿಂಕೇಕರು ನನಗೆ ಸಂಬಂಧಿಸಿದ ಮೇಕೆಗಳ ಹತ್ತಿರ ಬಂದು ಕೂಗತೊಡಗಿತು. ಬಹುಃಶ ಅದು ತನ್ನ ತಾಯಿಯಿಂದ ಬೇರ್ಪಟ್ಟು ಹೀಗೆ ಬಂದಿರಬೇಕು.

ಆ ಜಿಂಕೆ ಕರುವನ್ನು ನೋಡಿದ ಕೂಡಲೇ, ಅದನ್ನು ಹಿಡಿದು ಪಳಗಿಸಬೇಕೆಂದು ನನಗೆ ತೋರಿ, ಹಾರಿಹಾರಿ ಓಡುತ್ತ ಅದರ ಹತ್ತಿರ ಹೋದೆ. ಅಷ್ಟರೊಳಗೆ ಏಕಾಕ್ಷಿ ಕೂಡಾ ಆ ಜಿಂಕೆಕರುವನ್ನು ನೋಡಿದ. “ನಾನೇ ಮೊದಲು ನೋಡಿದ್ದು. ಅದು ನನ್ನದು” ಎನ್ನುತ್ತ ನನ್ನ ಹಿಂದೆಯೇ ಅವನೂ ಓಡಿಬಂದ.

ನಾನು ಮಾತ್ರ ಮೊದಲು ಹೋಗಿ ಆ ಜಿಂಕೆ ಕರುವನ್ನು ಹಿಡಿದುಕೊಂಡೆ. ನನ್ನ ಹತ್ತರ ಇರುವ ಹಗ್ಗವನ್ನು ಅದರ ಕೊರಳಿಗೆ ಕಟ್ಟಿ ಎಳೆಯುವ ಪ್ರಯತ್ನದಲ್ಲಿದ್ದೆ. ಅಷ್ಟರಲ್ಲಿ ಏಕಾಕ್ಷಿ ಬಂದು, ಜಿಂಕೆಕರು ತನ್ನದೆನ್ನುತ್ತ ನನ್ನ ಮೇಲೆ ಬಿದ್ದು ಬಲಾತ್ಕಾರಕ್ಕೆ ತೊಡಗಿದ. ನಾನು ಒಂದು ಕಲ್ಲನ್ನೆತ್ತಿ ಅವನ ತಲೆಗೊಂದು ಕೊಟ್ಟೆ. ಕಿರುಚುತ್ತಾ ಏಕಾಕ್ಷಿ ನೆಲಕ್ಕೆ ಬಿದ್ದ.

ಇಷ್ಟರೊಳಗೆ ಜಿಂಕೆಕರು ಕುತ್ತಿಗೆಯ ಹಗ್ಗದೊಂದಿಗೆ ಓಡಿಹೋಗತೊಡಗಿತು. ನಾನೂ ಓಡುತ್ತ ಅದರ ಹಿಂದೆ ಬಿದ್ದೆ. ಮರಗಳ ಸಂದಿನಲ್ಲಿಯೂ, ಪೊದರುಗಳನ್ನು ಎಗರಿಯೂ ಓಡುತ್ತಾ ಅಂತೂ ಜಿಂಕೆಕರುವನ್ನು ಮತ್ತೆ ಹಿಡಿದೆ. ಆ ಸಮಯದಲ್ಲಿ ನಾನು ಬಳಲಿ ಹೋಗಿದ್ದೆನಾದುದರಿಂದ, ನನ್ನ ಕೈಯಿಂದ ತಪ್ಪಿಸಿಕೊಳ್ಳಲು ನೋಡುವ ಜಿಂಕೆಕರುವನ್ನು ಬಿಡದೆ ಅದರ ಕೊರಳ ಹಗ್ಗವನ್ನು ಹಿಡಿದು ಎಳೆಯುತ್ತಲೇ ಇದ್ದೆ.

ಆ ಪರಿಸ್ಥಿತಿಯಲ್ಲಿ ನನ್ನ ಗುಂಡಿಗೆ ನೀರಾಗುವ ಹಾಗೆ ಸಿಂಹದ ಗರ್ಜನೆಯೊಂದು ಕೇಳಿಸಿತು. ಆ ಶಬ್ದ ಬಹಳ ಸಮೀಪದಿಂದಲೇ ಹೊರಟಿತ್ತು ! ನಾನು ಕ್ಷಣಮಾತ್ರದಲ್ಲಿ ಜಿಂಕೆಕರುವನ್ನು ಮರಕ್ಕೆ ಕಟ್ಟಿ, ಮರವನ್ನೇರಿ ಕೊಂಬೆಗಳ ಮೇಲೆ ಹೋದೆ.

ಮರದಕೊಂಬೆಯಲ್ಲಿ ತಕ್ಕ ಜಾಗೆ ಸೇರಿದ ಮೇಲೆ ನನ್ನ ಗುಂಡಿಗೆ ಸ್ತಿಮಿತಕ್ಕೆ ಬಂತು. ಆಗಷ್ಟೇ ನಾನು ಮಾಡಿದ ತಪ್ಪು ಅರ್ಥವಾದುದು. ಮರಕ್ಕೆ ಕಟ್ಟಲ್ಪಟ್ಟ ಜಿಂಕೆಕರು ಹಗ್ಗದಿಂದ ಬಿಡಿಸಿಕೊಳ್ಳಲು ಕುಣಿದಾಡುತ್ತ ಕೂಗುತ್ತಿತ್ತು. ಒಂದು ವೇಳೆ ಸಿಂಹವು ದೂರದಲ್ಲಿ ಹೋಗುತ್ತಿದ್ದರೂ ಅದರ

ಕೂಗನ್ನು ಕೇಳಿ ಖಂಡಿತಾ ಬರುವುದೆಂದು ತುಂಬಾ ಹೆದರಿದೆ. ಹೆದರುವುದೇನು ? ಒಂದೆರಡು ನಿಮಿಷ ದಲ್ಲೇ ಸಿಂಹ ಬಂದೇ ಬಂತು.!

ಮರದಕೊಂಬೆಯಲ್ಲಿರುವ ನನಗೆ ಪ್ರಾಣಭಯ ವಿರಲಿಲ್ಲ ನಿಜ. ಆದರೆ ಜಿಂಕೆಕರುವಿನ ಮೇಲೆ ಸಿಂಹ ಹಾರಿಬಿಟ್ಟಿತ್ತು ! ಆಗ ಅರಚುವ ಆ ಜಿಂಕೆಕರುವಿನ ಅವಸ್ಥೆ ನೋಡಿ ನಾನು ಸುಮ್ಮನಿರಲಾಗದೆ ಮರದ ಕೊಂಬೆಯೊಂದನ್ನು ಮುರಿದು ಸಿಂಹದ ಮೇಲೆ ಬೀಸಿ ಒಗೆದೆ. ಅದೂ ದೊಡ್ಡ ತಪ್ಪೇ ಆಯಿತು. ಆಗಲೇ ಸಿಂಹ ತಲೆ ಎತ್ತಿ ನನ್ನನ್ನು ನೋಡಿತು ! ಜಿಂಕೆಕರು ಅದರ ಅರ್ಧ ಹೊಟ್ಟೆಗಾದರೆ, ಪೂರ್ತಿ ಹೊಟ್ಟೆ ತುಂಬಲು ಮರದ ಮೇಲಿರುವ ನರಪ್ರಾಣಿ ಆಗುವನೆಂದುಕೊಂಡಿದೆ ಅದು !

ಸಿಂಹವು ಮೊದಲು ಜಿಂಕೆಕರುವನ್ನು ಕೊಂದು, ತಿನ್ನುವಂಥಾದ್ದೆಲ್ಲಾ ತಿಂದು ಮುಗಿಸಿತು. ತಿನ್ನುತ್ತಿರುವಾಗಲೇ ಮಧ್ಯೆ ಮಧ್ಯೆ ತಲೆಯೆತ್ತಿ ನನ್ನ ಕಡೆಗೆ ನೋಡುತ್ತಲೂ ಇತ್ತು. ಕಟ್ಟಕಡೆಗೆ ಅದು ನನ್ನನ್ನು ಹಿಡಿಯಬೇಕೆಂದು ಮೇಲಕ್ಕೆ ಸಾಧ್ಯವಾದಷ್ಟು ಎಗರ ತೊಡಗಿತು. ನಾನು ಇನ್ನಿಷ್ಟು ಮೇಲಿನ ಕೊಂಬೆಗೆ ಏರಿಕೊಂಡೆ.

ಆದರೂ ಸಿಂಹವು ತನ್ನ ಪ್ರಯತ್ನ ಬಿಡಲಿಲ್ಲ. ಸೂರ್ಯಾಸ್ತಮನ ಆಗುವವರೆಗೂ ಅದು ಮರದ ಕೆಳಗೆ ಗಟ್ಟಿ ಕಾವಲಾಗಿ ಕುಳಿತಿತು.

ಆ ರಾತ್ರಿ ಪೂರಾ ನಾನು ರೆಪ್ಪೆಗೆ ರೆಪ್ಪೆ ಹಚ್ಚದೆ ಮರದಕೊಂಬೆಗೆ ಅಂಟಿಕೊಂಡಿದ್ದೆ. ಬೆಳಗಾದ ಮೇಲೆ ಕೂಡಾ ನನಗೆ ಮರದಿಂದ ಇಳಿಯುವ ಧೈರ್ಯ ಬರಲಿಲ್ಲ. ಸಿಂಹವು ಮರದ ಕೆಳಗೆ ಕಾಣದಿದ್ದರೂ ಸಮೀಪದಲ್ಲೇ ಎಲ್ಲಿಯಾದರೂ ತಿರುಗಾಡಿಕೊಂಡಿದೆ ಎಂದು ನನಗೆ ಗೊತ್ತು. ಆಗಾಗ ದೂರದಿಂದ ಅದರ ಗರ್ಜನೆಯ ಧ್ವನಿ ಕೇಳುತ್ತಲೇ ಇದ್ದಿತು. ಹೀಗಾದರೆ ನಾನು ಹಸಿವೆ



ನೀರಡಿಕೆಗಳಿಂದ ಒಣಗಿ ನಿಶ್ಶಕ್ತನಾಗಿ ಮರದಿಂದ ಬಿದ್ದರೂ ಸಾವೇ ಗತಿ! ಸಾವಿನ ಅಂಜಿಕೆ ಭೂತದಂತೆ ನನ್ನನ್ನು ಹಿಡಿದಿತ್ತು.

ಸುಮಾರು ನಡು ಮಧ್ಯಾಹ್ನದ ಹೊತ್ತಿನಲ್ಲಿ ನನ್ನ ಕರ್ಣಪುಟಗಳು ಒಡೆದು ಹೋಗುವಹಾಗೆ ತಮಟೆಗಳ ಶಬ್ದ ಒಮ್ಮೆಗೇ ಕೇಳತೊಡಗಿತು. ಅದು ನಮ್ಮ ಹಳ್ಳಿಯ ಜನರು ನನ್ನನ್ನು ಹುಡುಕಿಕೊಂಡು ಬಂದಿದ್ದಾರೆಂಬುದರ ಸೂಚನೆಯಾಗಿತ್ತು. ನನ್ನ ಜತೆಗಾರರಾದ ಹುಡುಗರು ಕಾಡಿನೊಳಗೆ ಓಡಿದ ನಾನು ತಿರುಗಿ ಬರಲಿಲ್ಲವೆಂದು ಹಳ್ಳಿಯವರೊಂದಿಗೆ ಹೇಳಿರುತ್ತಾರೆ. ಅಂತಲೇ ಹೀಗೆ ಹುಡುಕುತ್ತಾ ಬಂದಿದ್ದಾರೆ! ಇದರಿಂದ ಬದುಕುವ ಆಸೆ ಚೇತರಿಸುತ್ತಿತ್ತು ನನ್ನಲ್ಲಿ.

ತಮ್ಮಟೆಗಳ ಧ್ವನಿ ಕ್ರಮವಾಗಿ ಸಮೀಪಿಸುತ್ತಿತ್ತು. ಇನ್ನು ಮರವಿಳಿದು ಅವರ ಮುಂದೆ ಹೋಗಬಹುದೆಂದು ಎಣಿಸಿ, ಮೆಲ್ಲನೆ ಇಳಿಯಲೂ ತೊಡಗಿದೆ. ಒಮ್ಮೆಗೇ ನೆಲಕ್ಕಿಳಿದರೆ ಪೊದರಿನ ಹಿಂದೆ ಸಿಂಹವಿದ್ದರೆ ಏನುಗತಿ, ಎಂಬ ಅಂಜಿಕೆ ತಡೆಯಿತು. ಮನುಷ್ಯರ ಪ್ರಾಣ ಹೋಗಲು ಸಿಂಹದ ಒಂದೇಟೇ ಸಾಕು! ಅವರು ತೀರ ಹತ್ತಿರ ಬಂದ ಮೇಲೆಯೇ ಇಳಿಯುವುದು ಒಳಿತು.

ಈಟಿ, ಬರ್ಚಿ, ದೊಣ್ಣೆ, ಕೊಡಲಿ, ಕತ್ತಿ ಮುಂತಾದ ಆಯುಧಗಳನ್ನು ಧರಿಸಿದ ಸುಮಾರು ಐವತ್ತು ಜನ ನಮ್ಮ ಹಳ್ಳಿಯವರು ಕಾಡಿನೊಳಗೆಲ್ಲಾ ಮಾರ್ಮೊಳಗುವಂತೆ ಬೊಬ್ಬಿಡುತ್ತಾ ಬರುತ್ತಿದ್ದರು. ಕೆಲವರು ತಮ್ಮಟೆಗಳನ್ನು ಹೊಡೆಯುತ್ತಿದ್ದರು. ಅವರೆಲ್ಲಾ ನಾನಿರುವ ಮರಕ್ಕೆ ಸುಮಾರು ಐವತ್ತು ಗಜ ದೂರದ ವರೆಗೆ ಬಂದರು.

ಸಿಂಹವನ್ನು ಕುರಿತು ನಾನು ಅನುಮಾನಿಸಿದ್ದು ನಿಜವೇ ಆಯಿತು. ಪೊದೆಗಳ ಮರೆಯಲ್ಲಿ ಅಡಗಿದ್ದ ಆ ಸಿಂಹ ಹಠಾತ್ತನೆ ಅವರ ಮೇಲಕ್ಕೆ ಧುಮುಕಿತು.



ಇಂತಹ ಆಕಸ್ಮಿಕ ಅಪಾಯಗಳು ಬರುತ್ತವೆಂದುಕೊಂಡು ತಕ್ಕ ಸಿದ್ಧತೆಯಲ್ಲೇ ಇದ್ದರು ನಮ್ಮ ಹಳ್ಳಿಯ ಬಂಟರು.

ಸಿಂಹವು ಮೇಲೆ ಹಾರಿದ ಕೂಡಲೇ ಅವರು ಹೆದರಿ ಚೆದರಿ ಹೋಗಲಿಲ್ಲ. ದೃಢಕಾಯನಾದ ಒಬ್ಬ ಯುವಕನು ಸಿಂಹದ ಪಂಜಾದ ಹೊಡೆತಕ್ಕೆ ತನ್ನ ಉದ್ದನ್ನ ಡಾಲನ್ನು ಒಡ್ಡಿ ತಡೆದನು. ಅದೇ ಸಮಯದಲ್ಲಿ ಮತ್ತೊಬ್ಬ ಯುವಕನು ಹಿಂದಿನಿಂದ ಅದನ್ನು ಬಿಗಿದು ಹಿಡಿದನು.

ಸಿಂಹವು ಗರ್ಜಿಸುತ್ತಾ ಹಿಂದಕ್ಕೆ ತಿರುಗಲು ನೋಡಿತು. ಅಷ್ಟರಲ್ಲಿ ಮೊದಲನೇ ಯುವಕನು ಬರ್ಚಿಯಿಂದ ಅದರ ಕುತ್ತಿಗೆಯ ಮೇಲೆ ಹೊಡೆದನು. ಪೆಟ್ಟು ತಿಂದ ಸಿಂಹ ರೋಷಾವೇಶದಿಂದ ಅರಚುತ್ತಾ ಮುಂದೆ ಹಾರಲು ನೋಡುವಾಗ ಬಾಲಹಿಡಿದ ಯುವಕನು ಕತ್ತಿಯಿಂದ ಅದರ ಬೆನ್ನಿನ ಮೇಲೆ ಹೊಡೆದನು.

ಸಿಂಹಕ್ಕೆ ದೊಡ್ಡ ದೊಡ್ಡ ಗಾಯಗಳಾದುವು. ಆ ಯುವಕರಿಬ್ಬರೂ ಸೇರಿ ಅದನ್ನು ತಮ್ಮ ಕೈಯಲ್ಲಿದ್ದ ಆಯುಧಗಳಿಂದ ಸಿಕ್ಕ ಸಿಕ್ಕ ಹಾಗೆ ಹೊಡೆಯುತ್ತಿರಲು, ಸಿಂಹವು ನೆಲದ ಮೇಲೆ ಉರುಳಿ ಹೊರಳಾಡ ತೊಡಗಿತು. ಮರದ ಕೊಂಬೆಯಲ್ಲಿದ್ದು ಇದನ್ನೆಲ್ಲಾ ನೋಡುತ್ತಿದ್ದ ನನಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಬೇಗ ಬೇಗನೇ ಮರದ ಕೊಂಬೆಗಳಿಂದ ಇಳಿದು ಬಂದು "ಓಹೋ!" ಎಂದು ದೊಡ್ಡ ದನಿಯಿಂದ ಕೂಗಿದೆ.

ಆ ಮರುಕ್ಷಣದಲ್ಲಿ ನಡೆದ ವಿಚಿತ್ರವನ್ನು ಕಣ್ಣೆದಿರೇ ನೋಡಿದ ನಾನೇ ನಂಬಲಾರದೆ ಹೋದೆನೆಂದರೆ, ಲೋಕದವರಾರೂ ನಂಬಲಾರರು. ನಾನು ಹಾಗೆ ಕೂಗಿದ ಕೂಡಲೇ ಎಲ್ಲರೂ ನನ್ನನ್ನು ನೋಡುತ್ತಾ ಗಕ್ಕನೆ ನಿಂತರು. ಆ ಕ್ಷಣದಲ್ಲಿ ತಮ್ಮಟೆ ಬಾರಿಸಿಕೊಂಡು ಮುಂದಿದ್ದ ಏಕಾಕ್ಷಿ "ದೆವ್ವೋ ದೆವ್ವಾ!" ಎಂದು ಕೆಟ್ಟದನಿಯಿಂದ ಅರಚಿ ಓಡ ತೊಡಗಿದನು. ಕಣ್ಣುಮುಚ್ಚಿ ಬಿಡಿಸುವುದರೊಳಗೆ ಉಳಿದವರು ಕೂಡಾ ಹೆದರಿ ಜೀವ ಬಿಡುವವರಂತೆ "ದೆವ್ವಾ! ದೆವ್ವಾ!" ಎಂದು ಕೂಗುತ್ತಾ ಓಡಿಬಿಟ್ಟರು. ಮತ್ತೆ ಆ ಸ್ಥಳದಲ್ಲಿ ನಾನೊಬ್ಬನೇ!

ಹೀಗೆ ಚತುರ್ನೇತ್ರನು ಹೇಳುತ್ತಿರಲು, ಬೆರಗಾಗಿ ಕೇಳಿಕೊಂಡಿದ್ದ ಸಮರಸೇನನು, "ಇದೆಂಥ ಆಶ್ಚರ್ಯ! ಎಂಥ ವಿಚಿತ್ರ! ಎಂಥ ಮಾಯಾಜಾಲ! ನಿನ್ನನ್ನು ನೋಡಿ ಅಷ್ಟು ಮಂದಿಯೂ ದೆವ್ವ ಎಂದು ನಂಬುವುದುಂಟೆ? ಒಬ್ಬನಿಗಾದರೂ ಬುದ್ಧಿಯಿಲ್ಲವೇ? ಅಷ್ಟು ಮೂಢರೇ?" ಎಂದನು.

ಚತುರ್ನೇತ್ರನು ಕೋಪದಿಂದ ಹಲ್ಲು ಕಡಿದು, "ಇದೆಲ್ಲಾ ಆ ಧೂರ್ತ ಏಕಾಕ್ಷಿ ಮಾಡಿದ ಮೋಸ! ಘಾತ! ಅವನು ನನ್ನನ್ನು ನೋಡಿ ದೆವ್ವ ಎಂದು ಓಡಿದ ಕೂಡಲೇ ಉಳಿದವರು ನನ್ನನ್ನು ಪರೀಕ್ಷಿಸಿ ನೋಡದೆ ಭಯಕಂಪಿತರಾಗಿ ಅವನನ್ನು ಅನುಸರಿಸಿದರೆಂದರೆ, ಅವನು ಹಾಗೆ ಅವರನ್ನು ನಂಬಿಸಿಟ್ಟಿದ್ದ. ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅವನು ಎಂಥ ಕಲ್ಮಷಬುದ್ಧಿಯುವನೆಂಬುದು ಈ ಒಂದು ಸಂಘಟನೆಯಿಂದ ಗೊತ್ತಾಗುತ್ತದೆ. ನಮ್ಮ ಹಳ್ಳಿಯ ಚಿಕ್ಕವರನ್ನೂ ದೊಡ್ಡವರನ್ನೂ ನಾನು ಸತ್ತು ದೆವ್ವವಾದೆನೆಂದು ನಂಬಿಸಿಬಿಟ್ಟನು. ಅವರನ್ನು ಅವನು ಕಾಡಿಗೆ ಕರಕೊಂಡು ಬಂದದ್ದು ನಾನು ಸತ್ತ ಜಾಗನ್ನು ತೋರಿಸಲಿಕ್ಕೇ ಎಂದೂ, ಕಾಡು ಮೃಗವು ನನ್ನನ್ನು ಕೊಂದು ತಿಂದಿದೆಯೆಂದೂ ಅವನು ಹೇಳಿರಬೇಕು. ಆಮೇಲೆ ಹತ್ತು ವರ್ಷಗಳ ವರೆಗೆ ನಾನು ದೆವ್ವವಾಗಿಯೇ ಅಡವಿಯಲ್ಲಿ ತಿರುಗಿಕೊಂಡು ಬದುಕಬೇಕಾಗಿ ಬಂತು." ಎಂದನು.

(ಇನ್ನೂ ಇದೆ)






# ಸಿಡಿಲಿನ ಹೊಡೆತ

ಎಂತಹ ಕಠಿಣ ಸಮಸ್ಯೆಯನ್ನಾದರೂ ಭೇದಿಸ ಬಲ್ಲವನಾದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿರುವ ಶವವನ್ನು ಕೆಳಗಿಳಿಸಿ, ತನ್ನ ಭುಜಸ್ಕಂಧದ ಮೇಲೆ ಹಾಕಿಕೊಂಡು ಎಂದಿನಂತೆ ಮೌನ ಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿ ಕೊಂಡಿರುವ ಬೇತಾಳವು ಮಾತಿಗೆ ತೊಡಗಿತು: "ರಾಜಾ ಒಂದು ನೋಡಿದರೆ ಯಾರ ಮನಸ್ಸು ಹೇಗಿರುವುದೆಂಬುದು ಯಾರಿಗೂ ತಿಳಿಯುವುದಿಲ್ಲ. ಅವರವರ ಮನಸ್ಸಿನ ಆಳವು ಅವರವರಿಗೇ ಗೊತ್ತಾಗುವುದಿಲ್ಲ. ಹಾಗೆಯೇ ನಿನ್ನ ಮನಸ್ಸಿನ ಆಳವೇನೆಂಬುದು ನನಗೂ ಗೊತ್ತಾಗುವುದಿಲ್ಲವೆಂಬುದನ್ನು ನೆನೆಯುವಾಗ ನನಗೆ ಇಬ್ಬರು ಅಣ್ಣ ತಮ್ಮಂದಿರ ಕಥೆ ನೆನಪಿಗೆ ಬರುತ್ತದೆ. ಹೇಳುತ್ತೇನೆ ಕೇಳು ಆ ಕಥೆಯನ್ನು" ಎಂದು ಕಥೆಯನ್ನು ಹೇಳಲು ಪ್ರಾರಂಭಿಸಿತು:

ಒಂದು ಊರಿನಲ್ಲಿ ನಾಗಭೂಷಣ ಮತ್ತು ಗಂಗಾಧರರಿಬ್ಬರೂ ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅಣ್ಣ ತಮ್ಮಂದಿರು. ಅವರು ಪರಸ್ಪರ

ಬೇತಾಳ ಕಥೆಗಳು...



ಗರ್ಭ ಶತ್ರುಗಳೆಂದರೂ ತಪ್ಪಿಲ್ಲ. ಅವರಿಬ್ಬರ ಮಧ್ಯೆ ಮೇಲಾಟವೋ, ಈರ್ಷ್ಯೆಯೋ, ಅಸೂಯೆಯೋ ಮತ್ತೇನೋ ಇತರ ಅಲ್ಪ ಕಾರಣದಿಂದಲೋ ದ್ವೇಷವು ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಗಿ ಕಡೆಗೆ ತೀವ್ರ ಸ್ಥಾಯಿಗೆ ಮುಟ್ಟಿತು.

ಒಂದು ಸಾರಿ ಪಶುಗಳ ಮಂದೆಯೊಂದು ಗುಡ್ಡದ ಮೇಲೆ ಮೇದು ಇಳಿದು ಬರುತ್ತಿರುವಾಗ, ಹುಲುಸಾಗಿ ಬೆಳೆದು ನಳನಳಿಸುವ ನಾಗಭೂಷಣನ ಗದ್ದೆಯಿಂದ ಯಿಂದ ಆಕರ್ಷಿತವಾಗಿ ಕೆಲವು ಪಶುಗಳು ಅದ ರೊಳಗೆ ನುಗ್ಗಿದುವು. ಇದನ್ನು ತಸುದೂರದಲ್ಲಿದ್ದು ಕಣ್ಣಾರೆ ನೋಡುತ್ತಿದ್ದ ಗಂಗಾಧರನು ಒಳಗೊಳಗೇ ತುಂಬಾ ಸಂತೋಷಪಟ್ಟನು. ಅಷ್ಟರೊಳಗೆ ಪಶು ಗಳನ್ನು ನೋಡಿಕೊಳ್ಳುವ ಹುಡುಗನು ಸದ್ದೆಬ್ಬಿಸುತ್ತಾ ಓಡಿ ಬಂದು ಆ ಪಶುಗಳನ್ನು ಹಿಂದಿರುಗಿಸಿಬಿಟ್ಟನು. ಈ ಸಮಾಚಾರವನ್ನು ಯಾರೋ ನಾಗಭೂಷಣನಿಗೆ ತಿಳಿಸಿಬಿಟ್ಟರು. ಕೂಡಲೇ ನಾಗಭೂಷಣನು ಕೋಪ ದಿಂದ ಬಂದು, ಪಶು ಪಾಲಕನಾದ ಹುಡುಗನನ್ನು ಹಿಡಿದು ಬೆನ್ನಿನಲ್ಲಿ ಬಾಸುಂಡೆ ಬರಿಸಿದನು.

ಇದಾದ ಮೇಲೆ ಗಂಗಾಧರನು ಸುಮ್ಮನಿರದೆ ಊರವರೊಂದಿಗೆ "ಏನಾದರೂ ಆ ಹುಡುಗನನ್ನು ಅವನು ಹೀಗೂ ಹೊಡೆಯಬಹುದೆ? ಬಾಯಿ ಬಾರದ ಪಶುಗಳು ಆಕಸ್ಮಾತ್ತಾಗಿ ಗದ್ದೆಗಿಳಿದರೆ ಆ ಹುಡುಗ ಕೂಡಲೇ ಬಂದು ಹೆದರಿಸಿ ಹಿಂದಿರುಗಿಸಿ ದ್ದಾನೆ. ಇಲ್ಲದಿದ್ದರೆ ಗದ್ದೆ ಪೂರಾ ಹಾಳಾಗಿ ಬಿಡು ತ್ತಿತ್ತು. ಆದರೂ ನಮ್ಮ ಭೂಷಣ್ಣನಿಗೆ ಗರ್ವ ಜಾಸ್ತಿ. ತನ್ನ ಗದ್ದೆ ಬಹಳ ಚೆನ್ನಾಗಿ ಬೆಳೆದಿದೇ ಅಂತ ಅಹಂಕಾರವಲ್ಲದೆ ಮತ್ತೇನು? ಅಂಥವನಿಗೆ ದೇವರೇ ಬುದ್ಧಿ ಕಲಿಸದೆ ಬಿಡಲಾರ!" ಎಂದನು.

ತನ್ನ ತಮ್ಮನು ತನ್ನನ್ನು ಕುರಿತು ಈ ರೀತಿ ಯಾಗಿ ಪ್ರಚಾರ ಮಾಡುವ ಸಮಾಚಾರ ನಾಗ ಭೂಷಣನಿಗೆ ಗೊತ್ತಾಗಿ ಉರಿದು ಬಿದ್ದನು.

ಅದಾಗಿ ಕೆಲವು ದಿನಗಳ ಮೇಲೆ ಗಂಗಾಧರನು ಗಾಡಿ ತುಂಬಾ ಹುಲ್ಲು ತುಂಬಿಸಿಕೊಂಡು, ಗುಡ್ಡದ ಬೀದಿಯಲ್ಲಿ ಇಳಿದು ಬರುತ್ತಿದ್ದಾಗ, ಒಂದು ಎತ್ತಿನ ಕಾಲಿಗೆ ಮಡಿಕೆ ಬಂದು, ಎತ್ತು ಬೊತ್ತನೆ ನೆಲಕ್ಕೆ ಕುಸಿಯಿತು. ಭಾರವಾದ ಆ ಗಾಡಿಯನ್ನು ಎತ್ತಿ ಎತ್ತನ್ನು ನಿಲ್ಲಿಸಲು ತನ್ನೊಬ್ಬನಿಂದ ಸಾಧ್ಯವಾಗದೆ ಗಂಗಾಧರನು ಗದ್ದೆಯಲ್ಲಿ ಕೆಲಸ ಮಾಡಿಕೊಂಡಿರು ವವರನ್ನು ಸಹಾಯಕ್ಕೆ ಕರೆದನು. ಎತ್ತಿನ ಕಾಲು ಮುರಿದು ಹೋದುದರಿಂದ, ಗಂಗಾಧರನು ಅಲೆದಾಡಿ ಕಷ್ಟಪಟ್ಟು ಬೇರೊಂದು ಎತ್ತನ್ನು ತಂದು ಗಾಡಿಗೆ ಹೂಡಬೇಕಾಯಿತು.

ಈ ಸಮಾಚಾರವನ್ನು ಕೇಳಿ ನಾಗಭೂಷಣನು ತನ್ನೊಳಗೆ ಸಂತೋಷವಡುತ್ತ, ಕಣ್ಣಿಗೆ ಬಿದ್ದ ಪ್ರತಿ ಯೊಬ್ಬನೊಂದಿಗೂ "ಪಾಪ, ನಮ್ಮವನ ಎತ್ತಿಗೆ ಕಾಲು ಮುರಿಯಿತಂತಲ್ಲಾ! ಹೌದು ಮತ್ತೆ! ಯಾರ ಗರ್ವ ಹೇಗೆ ಮುರಿಯಬೇಕೆಂದು ಭಗವಂತನಿಗೆ



ಚೆನ್ನಾಗಿ ಗೊತ್ತಿದೆ" ಎಂದನು. ಹೀಗೆ ಅವನು ಸಂತೋಷದಲ್ಲಿ ಹೇಳಿದ ಸಮಾಚಾರ ಗಂಗಾಧರನಿಗೆ ಗೊತ್ತಾಯಿತು. ಅವನು ಕೆಂಡದ ಮೇಲೆ ಬಿದ್ದ ಗುಗ್ಗುಳದ ಹಾಗಾದನು.

ಈ ಅಣ್ಣ ತಮ್ಮಂದಿರ ಹೆಂಡತಿಯರು ಕೂಡಾ ತಮ್ಮ ತಮ್ಮ ಗಂಡಂದಿರ ಹಾಗೆ, ತುಸು ಹೆಚ್ಚಾಗಿಯೇ ದ್ವೇಷ ಸಾಧನೆ ಮಾಡುತ್ತಿದ್ದರು. ಮೊದಲೇ ಜೊತೆ ಸೊಸೆಯರು. ಅದಕ್ಕೆ ಜೋಡು ಗಂಡಂದಿರ ಮಧ್ಯದಲ್ಲಿರುವ ದ್ವೇಷ. ಅಂತಲೇ ಆ ಹೆಣ್ಣುಗಳಿಬ್ಬರೂ ತಮ್ಮ ಈರ್ಷ್ಯೆಗಳನ್ನು ಅಡಗಿಸಿಕೊಳ್ಳಬೇಕಾಗಿರಲಿಲ್ಲ. ಅವರು ನೆರೆಕರೆಯವರೊಂದಿಗೆ ಒಬ್ಬರ ಮೇಲೊಬ್ಬರು ಚಾಡಿಗಳನ್ನು ಹೇಳಿಕೊಳ್ಳುತ್ತಿದ್ದರು. ಆ ನೆರೆಕರೆಯವರು ಇಲ್ಲಿಯ ಮಾತು ಅಲ್ಲಿಯೂ, ಅಲ್ಲಿಯ ಮಾತು ಇಲ್ಲಿಯೂ ಹೇಳುತ್ತ, ಆ ಜೋಡಿ ಸೊಸೆಯರ ನಡುವೆ ದ್ವೇಷವು ಹೆಚ್ಚುವಂತೆ ಒಣ ಹುಲ್ಲು ಹಾಕುತ್ತಿದ್ದರು.

ಒಂದುಸಾರಿ ಗಂಗಾಧರನ ಹೆಂಡತಿ, ಯಾವುದೋ ನಗವನ್ನು ಮಾಡಿಸಿಕೊಂಡು ಆನಂದದಿಂದ ಉಬ್ಬುತ್ತ ಸುತ್ತುಮುತ್ತಿನವರೊಂದಿಗೆ, "ಏನೋ ನಮ್ಮ ದೇವರ ದಯ ! ಹಣವಿದ್ದವರಿಗೆಲ್ಲಾ ಅನುಭವಿಸುವ ಯೋಗವೂ ಬೇಕಲ್ಲ !" ಎಂದಳು.

ವ್ಯಂಗ್ಯವಾದ ಈ ಉದ್ಗಾರದ ಮಾತಿಗೆ ಉಪ್ಪು ಖಾರ ಒಗ್ಗರಣೆಗಳೆಲ್ಲ ಸೇರಿ, ನಾಗಭೂಷಣನ ಹೆಂಡತಿಯ ಕಿವಿಗೂ ಬಿತ್ತು. ತನ್ನ ನೆಗೆಣ್ಣಿ ತನ್ನನ್ನು ಕುರಿತೇ ಆ ಮಾತು ಹೇಳಿದಳೆಂದುಕೊಂಡು ನಾಗಭೂಷಣನ ಹೆಂಡತಿ ಕಣ್ಣೀರು ತುಂಬಿಕೊಂಡು ತನ್ನ ಗಂಡನೊಡನೆ ತನಗಾದ ಅವಮಾನವನ್ನು ಕುರಿತು ಹೇಳಿದಳು. "ನಾವು ಗತಿಗೋತ್ರ ಇಲ್ಲದವರೆಂದುಕೊಂಡಳೂ ಅಂತ ಕಾಣುತ್ತೆ. ನನಗೆ ಅವಳಿಗಿಂತ ಚೆಂದವಾದ ನಗ ಮಾಡಿಸದೇ ಇದ್ದರೆ ಅವಳ ಪೊಗರು ತಗ್ಗುವುದಿಲ್ಲ!" ಎಂದಳು.

ನಾಗಭೂಷಣನು ಹೆಂಡತಿಯನ್ನು ಬಲಪಡಿಸುತ್ತ ತನ್ನ ಹೆಂಡತಿಗೆ ತುಂಬ ಬೆಲೆಬಾಳುವ ನಗವನ್ನು ಮಾಡಿಸಿಕೊಟ್ಟನು. ಏನೋ ಒಂದು ಪೂಜೆಗೆ ಅರಸಿನ ಕುಂಕುಮಕ್ಕೆ ಕರೆದಂತೆ ನಾಲ್ಕಾರು ಮನೆಗಳ ಹೆಂಗಸರನ್ನು ತನ್ನ ಮನೆಗೆ ಬರಮಾಡಿಸಿ, ತನ್ನ ನಗವನ್ನು ಅವರಿಗೆ ತೋರಿಸುತ್ತ, "ನೀವೇನೋ ಚೆನ್ನಾಗಿದೆ ಅಂತೀರಿ ! ಇದನ್ನು ನೋಡಿ ಕಣ್ಣಿನಲ್ಲಿ ಕಿಡಿ ಹಾಯಿಸುವವರು ನಮ್ಮಲ್ಲೇ ಇದ್ದಾರೆನ್ನಿ ! ಹಾಗಂತ ಹೆದರಿ ಮಾಡಿಸಿಕೊಳದಿರಲು ಸಾಧ್ಯವೇ ? ಯಾರ ಪ್ರಾಪ್ತಿ ಅವರಿಗೆ !" ಎಂದು ವ್ಯಾಖ್ಯಾನಿಸಿದಳು.

ಆ ಮಾತು ಆ ಬಾಯಿ ಈ ಬಾಯಿಗಳಿಗೆ ಹೋಗಿ ಗಂಗಾಧರನ ಹೆಂಡತಿಯ ಕಿವಿಯೊಳಗೆ ಹೋಯಿತು. ಅವಳು ಮುಖವನ್ನು ಸಿಂಡರಿಸಿಕೊಂಡು, "ಹೌದೌದು. ಎತ್ತಿಗೆ ಕಟ್ಟಿದ ಗಂಟೆಗಳ ಮಾಲೇಹಾಗಿದೆ ಆ ನಗ. ಅದನ್ನು ನೋಡಿದರೆ ಕಣ್ಣಿನಲ್ಲಿ ಕಿಡಿಯಲ್ಲ, ಧೂಳು ಮುಚ್ಚಿಕೊಳ್ಳುತ್ತೆ. ಯಾವುದೂ



ಆತಿಯಾದರೆ ಅಸಹ್ಯವಲ್ವೇ! ಅವಳೇ ಮೆಚ್ಚಿಕೋ ಬೇಕು!" ಎಂದು ಪ್ರತಿಯಾಗಿ ವ್ಯಾಖ್ಯಾನಿಸಿದಳು.

ಇಂತಹ ಚಿಕ್ಕ ಪುಟ್ಟ ಸಂಘಟನೆಗಳು ಪಾಪದ ಕೊಡ ಒಡೆದ ಹಾಗೆ, ಒಂದೇ ಕುಟುಂಬದ ಆ ಜೋಡು ನೆಗೆಣ್ಣಿಯರು ಒಬ್ಬರ ಮೇಲೊಬ್ಬರು ಶಾಪ ಹಾಕಿಕೊಂಡು ಬೀದಿಗೆ ಬಿದ್ದು ಬೈದಾಡಿದ್ದುಂಟು. ಅಣ್ಣ ತಮ್ಮಂದಿರು ಕೂಡಾ ಕೈ ಕೈ ಮಿಲಾಯಿಸಿ ಗುದಮುರಿಗೆ ಹಾಕಿಕೊಂಡದ್ದೂ ಉಂಟು.

ಹೀಗಿರುವಾಗ ಒಂದು ಮಳೆಗಾಲದಲ್ಲಿ ಕುಂಭ ವೃಷ್ಟಿಯಾಗಿ ಮಳೆ ಸುರಿಯುತ್ತಿದ್ದಿತು. ಮೊದಲೇ ಗಂಗಾಧರನ ಮನೆಯ ಒಂದು ಬದಿಯ ಗೋಡೆ ಯಲ್ಲಿ ಒಡಕು ಬಿಟ್ಟಿದ್ದಿತ್ತು. ಅದರಿಂದಾಗಿ ಮಳೆಯ ರಭಸಕ್ಕೆ ಮಾಡಿನಲ್ಲಿ ದೊಡ್ಡ ಬಿರುಕುಂಟಾಗಿ ನೀರು ಬುಳು ಬುಳು ಸೋರತೊಡಗಿತು. ಅದಕ್ಕೇನಾದರೂ ತಡೆ ಹಾಕೋಣವೆಂದುಕೊಂಡು ಗಂಗಾಧರನು ಮಾಡಿನ ಮೇಲೆ ಏರಿದನು. ಅಷ್ಟರಲ್ಲಿ ಕಣ್ಣು ಕುರುಡಾಗುವ ಮಿಂಚು ಥಳಿಸಿ, ಲಟಲಟಾಲ್ಲೆಂದು ದೊಡ್ಡ ಸಿಡಿಲು ಹೊಡೆಯಿತು. ಆಗಲೇ ಮಾಡಿನ ಒಂದು ಭಾಗವು ನೆಲಕ್ಕೆ ಬಿತ್ತು. ಗಂಗಾಧರನು ಎಲ್ಲಿಯೂ ಕಾಣಲಿಲ್ಲ.

ಅವನ ಹೆಂಡತಿ ಕೆಟ್ಟ ದನಿಯಿಂದ ಅಳುತ್ತಾ ತನ್ನ ಗಂಡನನ್ನು ಕೂಗಿ ಕರೆದು, ಪ್ರತ್ಯುತ್ತರ ಬಾರ ದಿರಲು, ಗೋಳೋ ಎಂದು ಅಳುತ್ತ, ಆವೇಶ ಬಂದವಳ ಹಾಗೆ, ಪಕ್ಕದ ನಾಗಭೂಷಣನ ಮನೆಗೆ ಹೋಗಿ ಅಕ್ಕನನ್ನು ಅಪ್ಪಿಕೊಂಡು, "ಅಕ್ಕಾ! ಕಾಪಾಡು! ಬಾವಾ! ನಿಮ್ಮ ತಮ್ಮನ್ನ ಕಾಪಾಡಿ!" ಎಂದು ರೋದಿಸಿದಳು.

ಇದನ್ನು ನೋಡಿ ಮರಗಟ್ಟಿದವನಂತೆ ನಿಂತಿದ್ದ ನಾಗಭೂಷಣನೊಂದಿಗೆ ಅವನ ಹೆಂಡತಿ, "ನೋಡುತ್ತಾ ನಿಂತಿದ್ದೀರಲ್ಲಾ! ಲಾಂದ್ರ ತೆಗೊಂಡು ಹೋಗಿ ನೋಡ್ರೀ! ಮೈದುನನಿಗೆ ಏನಾಯಿತೋ ಬೇಗ ಹೋಗ್ರೀ!" ಎಂದಳು.

ಮೂವರೂ ದೀಪದೊಂದಿಗೆ ಹೋಗಿ ನೋಡಿದರು. ಶಿಥಿಲಗಳ ನಡುವೆ ತಲೆಗೆ ಏನೋ ತಾಗಿ ಸ್ಪೃಹೆಯಿಲ್ಲದೆ ಬಿದ್ದಿದ್ದ ಗಂಗಾಧರನನ್ನು ನಾಗಭೂಷಣನು ಎತ್ತಿ ಈಚೆಗೆ ತಂದನು. ಅವನನ್ನು ತನ್ನ ಮನೆಯಲ್ಲಿ ಮಲಗಿಸಿ ಓಡಿ ಹೋಗಿ ವೈದ್ಯ ರನ್ನು ಕರೆದುಕೊಂಡು ಬಂದನು. ಕೂಡಲೇ ಮಾಡಿದ ಚಿಕಿತ್ಸೆಯಿಂದ ಗಂಗಾಧರನು ಎಚ್ಚರಕ್ಕೆ ಬಂದು ಕ್ರಮವಾಗಿ ಗುಣಮುಖನಾದನು.

ಆ ಮೇಲೆ ಎರಡು ಕುಟುಂಬಗಳ ನಡುವೆ ಶತ್ರುತ್ವ ಹೋಯಿತು. ಎಷ್ಟೋ ಕಾಲದ ಮೇಲೆ ಕೂಡಾ "ಆ ದಿನ ಬಾವಯ್ಯ ದೇವರ ಹಾಗೆ ಬಂದು ನನ್ನ ಅರಿಸಿನ ಕುಂಕುಮ ಉಳಿಸಿದರು!" ಎಂದು ಸಂದರ್ಭ ಬಂದಾಗಲೆಲ್ಲ ಹೇಳುತ್ತಿದ್ದಳು ಚಿಕ್ಕ ನೆಗೆಣ್ಣಿ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ಆ ಅಣ್ಣ ತಮ್ಮಂದಿರ ನಡುವೆ ನಿಜವಾಗಿಯೂ

ಇದ್ದುದು ಶತ್ರುತ್ವವೋ? ಆತ್ಮೀಯತೆಯೋ? ಅವರಿಬ್ಬರೂ ಬಹಳ ಕಾಲದವರೆಗೆ ಒಬ್ಬರಿಗೆ ಕಷ್ಟವೋ ನಷ್ಟವೋ ಬಂದರೆ ಇನ್ನೊಬ್ಬರು ಸಂತೋಷಪಡು ತ್ತಿದ್ದರಷ್ಟೇ? ನಾಗಭೂಷಣನು ತನ್ನ ತಮ್ಮನು ಪ್ರಾಣಾಪಾಯಕ್ಕೆ ಸಿಕ್ಕಿದಾಗ ಕಾಪಾಡಲು ಧಾವಿಸಿದ ನಲ್ಲಾ? ಅದಕ್ಕೆ ಕಾರಣವೇನು? ಆಮೇಲೆ ಅವರ ನಡುವೆ ವೈರವು ಪೂರ್ತಿ ಅಳಿದು ಹೋದುದು ಏತರಿಂದ? ಈ ಸಂದೇಹಗಳಿಗೆ ಸಮಾಧಾನ ತಿಳಿದು ಕೂಡಾ ಹೇಳದೇ ಹೋದರೆ ನಿನ್ನ ತಲೆ ನುಚ್ಚು ನೂರಾಗಿ ಹೋಗುತ್ತದೆ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಮಾನವರ ನಡುವೆ ಅಭಿಮಾನದ ಹಾಗೆಯೇ ದ್ವೇಷವೂ ಕಡಿಯಲಾಗದಂತಹ ಬಂಧವೆನಿಸಿದರೂ, ನಿರ್ಲಿಪ್ತತೆಯೂ, ನಿಃಸ್ವಾರ್ಥತೆಯೂ ಇದ್ದಲ್ಲಿ ಯಾವ ಬಂಧನವೂ ಇರುವುದಿಲ್ಲ. ದ್ವೇಷದ ಮೂಲಕವಾಗಿ ಮಾನವರು ಇತರರೊಂದಿಗೆ ಸಂಬಂಧ ಹಚ್ಚಿಕೊಳ್ಳುತ್ತಾರೆ. ಅದರ ಹಾಗೆಯೇ ಪ್ರೇಮಾನುರಾಗಗಳು ಎಷ್ಟೊಂದು ಗಾಢವಾಗಿರಲು ಸಾಧ್ಯವೋ ದ್ವೇಷ ಕೂಡಾ ಅಷ್ಟೊಂದು ಗಾಢವಾಗಿಯೇ ಇರುತ್ತದೆ. ಅತಿ ಸನ್ನಿಹಿತರಾದಂತಹ ಜ್ಞಾತಿಗಳೂ, ಅಣ್ಣ ತಮ್ಮಂದಿರೂ ಒಬ್ಬರನ್ನೊಬ್ಬರು ದ್ವೇಷಿಸಿಕೊಂಡಿದ್ದಾಗ ಆ ದ್ವೇಷವು ಮಿತಿ ಮೀರಿ ಬಿಡುತ್ತದೆ. ಎಲ್ಲಾ ವಿಧ ಶತ್ರುತ್ವಗಳಲ್ಲಿ ಗರ್ಭ ಶತ್ರುತ್ವವು ತೀವ್ರವಾದುದು. ಗಂಗಾಧರನು ಸತ್ತು ಹೋದರೆ ನಾಗಭೂಷಣನಿಗೆ ಸಂತೋಷವಾಗಲು ಕಾರಣವೇನಿಲ್ಲ. ತಮ್ಮನ ಸಾವಿನಿಂದ ನಾಗಭೂಷಣನಿಗೆ ಉಳಿಯುವುದೆಂದರೆ ಬರಿಯ ಶೂನ್ಯವೇ. ಏಕೆಂದರೆ ಆ ಅಣ್ಣ ತಮ್ಮಂದಿರ ನಡುವೆ ಇದ್ದ ವೈರವು ಸ್ವಾರ್ಥ ರಹಿತವಾದುದು. ಒಬ್ಬರು ಸತ್ತರೆ ಇನ್ನೊಬ್ಬರಿಗೆ ಲಾಭವೇನೂ ಬರುವುದಿಲ್ಲ. ಆದುದರಿಂದ ಗಂಗಾಧರನ ಪ್ರಾಣವನ್ನು ಕಾಪಾಡುವುದು ಅಣ್ಣನಿಗೆ ಸಹಜವೇ ಸರಿ. ಆಮೇಲೆ ಅವರ ನಡುವೆ ವೈರವೇಕೆ ಇರಲಿಲ್ಲವೆಂದರೆ, ಅದಕ್ಕೆ ಎರಡು ಕಾರಣಗಳು. ಮೊದಲನೆಯದಾಗಿ, ಕ್ರೋಧಕ್ಕಿಂತಲೂ ಪ್ರೇಮವು ಶಕ್ತಿವಂತವಾದುದು. ಪ್ರೇಮಕ್ಕೆ ಆಶ್ರಯವಿದ್ದಲ್ಲಿ ವೈರಕ್ಕೆ ತಾವಿಲ್ಲ. ಎರಡನೆಯದಾಗಿ, ಉಪಕಾರ ಹೊಂದಿದವನು ತನಗೆ ನಡೆದ ಒಳಿತನ್ನು ಮರೆಯುವನೇನೋ, ಆದರೆ ಉಪಕಾರ ಮಾಡಿದವನು ಮಾತ್ರ ತಾನು ಮಾಡಿದ ಒಳಿತನ್ನು ಜನ್ಮ ಪೂರಾ ಮರೆಯಲಾರನು. ಅಣ್ಣ ತಮ್ಮಂದಿರಿಬ್ಬರೂ ಒಳಿತನ್ನು ಮರೆಯಲಾಗದ ಸ್ಥಿತಿಯಲ್ಲಿರುವಾಗ ವೈರಕ್ಕೆ ತಾವಿಲ್ಲ.

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಹಾರಿ ಹೋಗಿ ಮರದ ಕೊಂಬೆಗೆ ನೇತು ಹಾಕಿಕೊಂಡಿತು.





# ಕಿವಿಗೊಂದು ರಾಗ

ಒಂದು ಊರಿನಲ್ಲಿ ಶಾಸ್ತ್ರಿ ಎಂಬ ಗಾಯಕಾಗ್ರೇಸರನಿದ್ದ. ಅವನು ಎಲ್ಲಾ ರಾಗಗಳನ್ನೂ ಹಾಡಲಾರ. ನೀಲಾಂಬರಿ ರಾಗವನ್ನು ಮಾತ್ರವೇ ಹಾಡುವವನು. ಅದೊಂದೇ ರಾಗದಲ್ಲಿ ಅಗ್ರೇಸರನಾದವನು. ಬೇರೆ ರಾಗವನ್ನು ಹಾಡೆಂದು ಯಾರಾದರೂ ಹೇಳಿದರೆ, ಆ ರಾಗದಲ್ಲಿ ಚೆನ್ನಾಗಿ ಹಾಡಲು ಅವನಿಂದಾಗದು.

ಆದುದರಿಂದ ಅವನ ಕಂಠದಿಂದ ಸರಾಗವಾಗಿ ಹರಿದು ಹೊರಡುವ ನೀಲಾಂಬರಿ ರಾಗವನ್ನೇ ಹಾಡಿಸಿ, ಕೇಳಿ ಜನರು ತನ್ಮಯರಾಗುವರು. ಅವನು ನೀಲಾಂಬರಿ ರಾಗವನ್ನು ಹಾಡಿದರೆ ಕಲ್ಲುಗಳು ಕರಗುತ್ತವೆಂದೂ, ಮರಗಳು ಓಲಾಡಿ ತಲೆದೂಗುತ್ತವೆಂದೂ ಹೇಳುವರು. ಅದು ಹೇಗೇ ಇದ್ದರೂ ಅವನ ನೀಲಾಂಬರೀ ಆಲಾಪನೆಯಿಂದ ಅದನ್ನು ಕೇಳುವ ಮಾನವರ ತಲೆಗಳು ಓಲಾಡುತ್ತ, ನಿದ್ರೆಯ ಮತ್ತಿನಿಂದ ತೂಕಡಿಸುತ್ತಾ, ಹಾಗೆಯೇ ನಿದ್ರಾ ಪರವಶರಾಗುವುದಂತೂ ನಿಜ.

ಇದರಿಂದ ಗಾಯಕ ಶಾಸ್ತ್ರಿ ನೀಲಾಂಬರಿ ಹಾಡಿ ಜನರನ್ನು ನಿದ್ರಾ ಪರವಶಗೊಳಿಸಬಲ್ಲನೆಂದು ಅವನೆಂದರೆ ಹಿಡಿಸದವರಿಗೂ ಗೊತ್ತಿತ್ತು. ಆದುದರಿಂದ ಯಾರಾದರೂ, "ಶಾಸ್ತ್ರಿಯ ಹಾಗೆ ನೀಲಾಂಬರೀ ರಾಗ ಹಾಡುವವರು ಯಾರೂ ಇಲ್ಲ! ನಾನು ಕಿವಿಯಾರೆ ಕೇಳಿ ಹೇಳುವ ಮಾತು!" ಎಂದರೆ "ನಿನ್ನ ಮುಖ! ಅವನ ರಾಗ ಹೊರಟ ಕೂಡಲೇ ನಿದ್ದೆ ಮಾಡಿದಿ, ಅಷ್ಟೇ! ಕೇಳಿದ್ದೇನು ಮಣ್ಣು!" ಎಂದು ಹಿಡಿಸದವನು ಹೇಳುತ್ತಿದ್ದನು.

"ಅದು ಮಾತ್ರ ಕಡಿಮೆ ಸಂಗತಿಯೋ? ಸಂಗೀತದಿಂದ ನಿದ್ದೆ ಬರಿಸುವಂಥ ಮೇಧಾವಿ ಯಾರಿದ್ದಾರೆ ಈ ಕಾಲದಲ್ಲಿ?" ಎಂದು ಶಾಸ್ತ್ರಿಯ ಅಭಿಮಾನಿಗಳು ಹೇಳಿದರೆ, "ಅದೊಂದು ಭಾರೀ ದೊಡ್ಡ ವಿದ್ಯೆಯಾಗುತ್ತದೇನು? ನನ್ನ ಅಜ್ಜಿ ಕೂಡಾ ದಿನಾ ಹಾಡುತ್ತಾ ನನಗೆ ನಿದ್ದೆ ಬರಿಸುತ್ತಾಳೆ. ಇದಕ್ಕೇನು ಹೇಳುತ್ತೀ?" ಎಂದು ತಿರುಗಿ ಕೇಳುತ್ತಾನೆ.

ಒಟ್ಟಿನ ಮೇಲೆ ಶಾಸ್ತ್ರಿ ನೀಲಾಂಬರಿ ರಾಗ ಹಾಡಿದರೆ ಎಂಥವರಿಗಾದರೂ ನಿದ್ದೆ ಬರುತ್ತದೆಂಬ ಮಾತು ಜನಜನಿತವಾಗಿ ಹೋಯಿತು. "ನಿದ್ರಾ ನೀಲಾಂಬರೀ ನಿಪುಣ ಗಾಯಕ"ನೆಂದು ಶಾಸ್ತ್ರಿಗೆ ಬಿರುದು ಕೂಡ ಬಂದಿತ್ತು.

ಎನ್. ಗೀತಾ

ಒಂದು ದಿನ ಶಾಸ್ತ್ರಿಯನ್ನು ಹುಡುಕುತ್ತಾ ಒಬ್ಬ ಮನುಷ್ಯನು ಬಂದನು. ಅವನು ನೋಡಲು ದೊಡ್ಡ ಮನುಷ್ಯನಂತೆ ಕಾಣುತ್ತಿದ್ದನು.

ಅವನು ಶಾಸ್ತ್ರಿಯ ಕೈಗೆ ಒಂದು ಹಣದ ಚೀಲವನ್ನು ಕೊಟ್ಟು, "ಅಯ್ಯಾ, ನಾಳೆ ರಾತ್ರಿ ತಾವು ಸಂಗೀತ ಕಚೇರಿ ನಡೆಸಿ ಕೊಡಬೇಕು. ಅದಕ್ಕಾಗಿ ಈ ಹಣವನ್ನು ಮೊದಲೇ ಕೊಡುತ್ತೇನೆ, ತೆಗೆದು ಕೊಳ್ಳಿ" ಎಂದನು.

"ನಾಳೆ ರಾತ್ರಿ ಯಾವ ಸ್ಥಳದಲ್ಲಿ? ಎಷ್ಟು ಗಂಟೆಗೆ?" ಎಂದು ಶಾಸ್ತ್ರಿ ಕೇಳಿದನು.

ಈ ವರೆಗೂ ಯಾರೂ ಮುಂದಾಗಿ ಹಣ ಕೊಟ್ಟು ಹಾಡಿಸಿದ್ದಿಲ್ಲ. ಅಂತೆಯೇ ಶಾಸ್ತ್ರಿಗೆ ಆಶ್ಚರ್ಯವೂ ಆಯಿತು. ಅದರೊಂದಿಗೆ ಉತ್ಸಾಹವೂ ಬೆರೆತಿತ್ತು.

"ರಾತ್ರಿ ಹನ್ನೆರಡು ಗಂಟೆಗೆ ಸಂಗೀತ ಪ್ರಾರಂಭಿಸಬೇಕು. ಸಂಗೀತ ಕಚೇರಿ ನಡೆಯುವ ಸ್ಥಳವನ್ನು ಈಗ ಹೇಳಲಾಗುವುದಿಲ್ಲ. ನಾಳೆ ರಾತ್ರಿ ನಾನೇ ಬಂದು ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ. ನಾನು ಹೇಳಿದ ಸ್ಥಳದಲ್ಲಿ ನೀವು ಹಾಡುವಿರಂತೆ" ಎಂದು ಹೇಳಿ ಆ ದೊಡ್ಡ ಮನುಷ್ಯ ಹೊರಟು ಹೋದನು.

ಮಧ್ಯರಾತ್ರಿಯ ಹೊತ್ತಿನಲ್ಲಿ ಎಂತಹ ಸಂಗೀತ ಕಚೇರಿಯೋ? ಹಾಗೆ ಎಂತಹ ಸಮಾರಂಭವೋ? ಏನಾದರೇನು? ತನಗೆ ಮುಂದಾಗಿಯೇ ಹಣ ಮುಟ್ಟಿದುದರಿಂದ ಸುಮ್ಮನೇ ಯೋಚಿಸುವುದನ್ನು ಬಿಟ್ಟನು ಶಾಸ್ತ್ರಿ.

ದೊಡ್ಡ ಮನುಷ್ಯನಂತೆ ಬಂದವನು ನಿಜಕ್ಕೂ ಒಬ್ಬ ಕಳ್ಳ. ಮರುದಿನ ರಾತ್ರಿ ಎಲ್ಲರಿಗೂ ನಿದ್ದೆ ಬಂದ ಮೇಲೆ ಆ ಕಳ್ಳನು ಇನ್ನೊಬ್ಬ ಕಳ್ಳನೊಂದಿಗೆ ಬಂದು ಶಾಸ್ತ್ರಿಯನ್ನು ಕರೆದುಕೊಂಡು ಖಜಾನೆಯ ಹತ್ತಿರಕ್ಕೆ ಹೋದನು. ರಾಜನ ಖಜಾನಾ ಭಾಗವದು. ಅಲ್ಲಿ ಮೂವರೂ ಕುಳಿತ ಮೇಲೆ ಶಾಸ್ತ್ರಿ ತನ್ನ ನೀಲಾಂಬರೀ ಆಲಾಪನೆಗೆ ತೊಡಗಿದನು. ಆ ರಾಗ ಕೇಳಿ ಕಾವಲುಗಾರರು ನಿದ್ರಾ ಪರವಶರಾದಾಗ ಖಜಾನೆಯನ್ನು ಕೊಳ್ಳೆ ಹೊಡೆಯುವುದು ಕಳ್ಳರ ಉದ್ದೇಶವಾಗಿತ್ತು.

ಆದರೆ ಕಾವಲಿನವರು ನೇಪಾಳ ದೇಶದವರು. ಅವರಿಗೆ ದಕ್ಷಿಣ ದೇಶದ ಸಂಗೀತವು ಹಿಡಿಸುವಂತಹುದಲ್ಲ. ಅಂತೆಯೇ ಅವರು ಸ್ವಲ್ಪವೂ ಆಕರ್ಷಿತರಾಗಲಿಲ್ಲ. ಶಾಸ್ತ್ರಿ ಹಾಡುತ್ತಿದ್ದಂತೆಯೇ ಬೆಳಗಾಯಿತು. ಕಳ್ಳರಿಬ್ಬರೂ ಯಾವಾಗಲೋ ಗೊರಕೆ ಹೊಡೆಯಲು ಪ್ರಾರಂಭಿಸಿದ್ದರು. ಖಜಾನೆಯ ಕಾವಲುಗಾರ ಬಂದು "ಬೆಳಗಾದರೂ ಇನ್ನೆಂಥ ಹಾಡು! ನಡೀರಿ ಮನೆಗೆ!" ಎಂದು ಅಧಟಿ ಎಬ್ಬಿಸಿ ಅವರನ್ನು ಕಳುಹಿಸಿಬಿಟ್ಟರು.





# ಎಲ್ಲಾ ಒಂದೇಸಾರಿ!

ಹಿಂದೆ ರಾಮಾಪುರದ ಜಮೀನುದಾರನಿಗೆ ಬಹಳ ಕಾಲ ಮಕ್ಕಳಿಲ್ಲದೆ ಕಡೆಗೆ ಒಬ್ಬ ಮಗ ಹುಟ್ಟಿದನು. ಆ ಮಗನಿಗೆ ಗೋಪಾಲನೆಂದು ಹೆಸರಿಟ್ಟು ಅತ್ಯಂತ ಅಚ್ಚೆಯಿಂದ ಬೆಳೆಸಿದರು. ಈ ಬಗೆಯ ತಂದೆ ತಾಯಿಗಳ ಅತಿರೇಕ ಅಕ್ಕರೆಯಿಂದಾಗಿ ಹುಡುಗನು ಶುದ್ಧ ಶುಂಠನಾಗಿಯೂ ಗಟ್ಟಿ ಹಟದವನಾಗಿಯೂ ಆಟದಲ್ಲೇ ಮಗ್ನನಾಗಿಯೂ ತಯಾರಾಗುತ್ತಿದ್ದನು. ಬೆಳಿಗ್ಗೆ ಏಳಲಾರ, ಸ್ನಾನವನ್ನೂ ಮಾಡಲಾರ. ಹಾಸಿಗೆ ಬಿಟ್ಟಕೂಡಲೇ ಆಡಲು ಓಡುವನು. ಹಸಿದಾಗ ಬಂದು ಒಂದಿಷ್ಟು ತಿಂದು ಮತ್ತೆ ಓಡುವನು, ಅಷ್ಟೇ.

ತನ್ನ ಮಗನ ಪರಿಸ್ಥಿತಿ ಶ್ರುತಿ ಮೀರಿದ ರಾಗ ವಾಗುವುದನ್ನು ನೋಡಿ ಜಮೀನುದಾರರು ಹೆದರಿ ನಯ ಭಯಗಳಿಂದ ಎಷ್ಟೋ ಬುದ್ಧಿ ಹೇಳಿ ನೋಡಿದರು. ಅದಾವುದೂ ಅವನಿಗೆ ಲಕ್ಷ್ಯವೆನಿಸ ಲಿಲ್ಲ. ಹುಡುಗನು ಮನೆಯವರ ಮಾತು ಕೇಳುವು ದಿಲ್ಲವೆಂದುಕೊಂಡು, ಅವನಿಗೆ ವಿದ್ಯಾಬುದ್ಧಿ ಕಲಿಸಲು ಸಮರ್ಥರಾದ ಗುರುಗಳನ್ನು ನಿಯಮಿಸಿದರು. ಅವರಿಂದ ಕೂಡಾ ಅವನನ್ನು ದಾರಿಗೆ ತಂದು ನಡೆಯಿಸಲಾಗಲಿಲ್ಲ.

ಅಂತಹ ಪರಿಸ್ಥಿತಿಯಲ್ಲಿ ಆ ಊರಿಗೆ ಒಬ್ಬ ಯುವಕನು ಬಂದನು, ಅವನವರೆಲ್ಲ ಅಂಟುರೋಗ ದಿಂದ ತೀರಿ ಹೋಗಿ, ಅವನೊಬ್ಬ ಬದುಕಿ ಉಳಿದು ಅನಾಥನಾಗಿ ಹೊರಟು ಬಂದಿದ್ದನಂತೆ. ಮರ್ಯಾದಸ್ಥ ನಾಗಿ ಕಾಣುವ ಆ ಯುವಕನನ್ನು ಜಮೀನುದಾರರು ಕರೆದು, ತನ್ನ ಮಗನ ಸಂಗತಿಯನ್ನು ಅವನೊಂದಿಗೆ ಹೇಳಿ, "ನೀನು ನಿನ್ನ ಸಾಮರ್ಥ್ಯದಿಂದ ನನ್ನ ಮಗನಿಗೆ ಒಳ್ಳೆಯ ಬುದ್ಧಿ ಕಲಿಸಬಲ್ಲವನಾದರೆ, ನಿನ್ನನ್ನು ಶಾಶ್ವತವಾಗಿ ನಮ್ಮಲ್ಲೇ ಇರಿಸಿಕೊಂಡು ನಿನಗೆ ಬೇಕಾದ ಎಲ್ಲವನ್ನೂ ಏರ್ಪಡಿಸುತ್ತೇನೆ" ಎಂದನು.

ಅದಕ್ಕೆ ಒಪ್ಪಿಕೊಂಡು ಹೊಸ ಯುವಕನು ಗೋಪಾಲನೊಂದಿಗೆ ಸ್ನೇಹ ಮಾಡಿಕೊಂಡು, ಬಗೆ ಬಗೆಯ ಕಥೆಗಳಿಂದ, ಹೊಸ ಹೊಸ ಆಟಗಳಿಂದ ಅವನನ್ನು ಆಕರ್ಷಣೆ ಮಾಡಿಕೊಂಡನು. ಗೋಪಾಲನು ಸಹಜವಾಗಿ ತಿಳುವಳಿಕೆಯುಳ್ಳ ಹುಡುಗನೇ ಎಂದೂ ಅವನ ದೃಷ್ಟಿ ಓದಿನ ಮೇಲೆ ಬೀಳುವ ಹಾಗೆ ಮಾಡಿಬಿಟ್ಟರೆ ಒಳ್ಳೆಯ ಸ್ಥಿತಿಗೆ ಬರುವನೆಂದೂ ಯುವಕನಿಗೆ ತೋರಿತು. ಆದರೆ ಯುವಕನು ಎಷ್ಟೇ ಹೇಳಿದರೂ ಗೋಪಾಲನು ತನ್ನ ಆಟ ಹಟ ತುಂಟತನ

ಗಳನ್ನು ಬಿಡದೆ, ಬದಲಾವಣೆಗೆ ಒಪ್ಪದೆ, "ಊಹುಂ ನನಗೆ ಇದೇ ಚೆನ್ನಾಗಿದೆ. ನಾನೇಕೆ ಬದಲಾಗಬೇಕು ?" ಎಂದು ಒಂದು ದಿನ ಕೇಳಿಯೇಬಿಟ್ಟನು.

"ಅದು ಒಮ್ಮೆ ಬದಲಾಗಿಬಿಟ್ಟರೆ ಗೊತ್ತಾಗುತ್ತೆ. ಏನನ್ನಾದರೂ ಅನುಭವಿಸಿದ ಹೊರತು ತಿಳಿಯದು. ದಿನಾ ಒಂದುಸಾರಿ ಸ್ನಾನ ಮಾಡಿ ನೋಡು. ನಿನ್ನ ಮನಸ್ಸಿಗೆ ಎಷ್ಟು ಸಂತೋಷ ಆಗುತ್ತೇ ಅಂತ ನಿನಗೇ ತಿಳಿಯುತ್ತೆ" ಎಂದನು ಯುವಕ.

"ನೋಡು. ನೀನೆಂದರೆ ನನಗೆ ಇಷ್ಟ. ಅದಕ್ಕೇ ನೀನು ಹೇಳಿದೀ ಅಂತಲೇ ಕೇಳುತ್ತೇನೆ. ನೀನು ಹೇಳಿದ ಹಾಗೆ ದಿನಕ್ಕೆ ಒಂದು ಸಾರಿ ಮಾತ್ರ ಮಾಡುತ್ತೇನೆ. ದಿನಾ ಬೆಳಿಗ್ಗೆ ಬೇಗನೇ ಎದ್ದು ಬಿಡುತ್ತೇನೆ. ಒಂದುಸಾರಿ ಸ್ನಾನ ಮಾಡುತ್ತೇನೆ. ಪುಸ್ತಕ ತೆರೆದು ಒಂದು ಪುಟ ಓದಿಬಿಡುತ್ತೇನೆ. ಆಮೇಲೆ ನನ್ನನ್ನುನೀನು ಆಡಿಸಿ ಕೊಂಡೇ ಇರಬೇಕು." ಎಂದನು ಗೋಪಾಲ.

ಯುವಕನಿಗೆ ಸಂತೋಷವಾಯಿತು. ಒಂದು ಸಾರಿ ಯಾದುದನ್ನು ಹಾಗೆಯೇ ಮುಂದುವರಿಸಿ ಕ್ರಮಕ್ಕೆ ತರಿಸಬಹುದೆಂದುಕೊಂಡು ಈ ಒಳ್ಳೆಯ ಸಮಾಚಾರ ವನ್ನು ಜಮೀನುದಾರರೊಂದಿಗೆ ಹೇಳಿದನು.

"ಇದೊಂದು ಒಳ್ಳೆಯದೇ. ಒಂದುಸಾರಿ ಕ್ರಮ ಬದ್ಧವಾದ ಅಭ್ಯಾಸಕ್ಕೆ ಬಂದುಬಿಟ್ಟರೆ, ಅನಂತರ ತನ್ನಂತಾನೇ ಸರಿದಾರಿಗೆ ಬರುತ್ತಾನೆ" ಎಂದುಕೊಂಡು ಜಮೀನುದಾರರು ಸಂತೋಷಪಟ್ಟರು.

ಮಾರನೇ ದಿನದಿಂದ ಗೋಪಾಲನು ಹೇಳಿದ ಮಾತಿನ ಪ್ರಕಾರವೇ ದಿನಾ ಬೆಳಿಗ್ಗೆ ಬೇಗನೇ ನಿದ್ರೆಯಿಂದೆದ್ದು ಸ್ನಾನಮಾಡಿ, ಯುವಕನು ಹೇಳಿದು ದನ್ನು ನೆನಪಿಟ್ಟುಕೊಂಡು ಪುಸ್ತಕದಲ್ಲಿ ಒಂದೇ ಒಂದು ಪುಟ ಮಾತ್ರ ಓದಿ ತಂದೆಗೆ ಒಂದು ನಮಸ್ಕಾರ ಮಾಡಿ, ಆಮೇಲೆ ಎಂದಿನಂತೆ ಆಟವೇ ಆಟ !

ಒಂದು ದಿನ ಜಮೀನುದಾರರ ಬಂಧುಗಳೊಬ್ಬರು ಅಲ್ಲಿಗೆ ಬಂದರು. ದಿನವಿಡೀ ಆಟದಲ್ಲಿರುವ ಗೋಪಾಲ



ನನ್ನು ನೋಡಿ "ಇದೇನು ? ಹುಡುಗನಿಗೆ ಓದು ಬರೆಹ ಕಲಿಸುವ ಆಲೋಚನೆ ಇಲ್ಲವೇ ?" ಎಂದು ಜಮೀನುದಾರರನ್ನು ಕೇಳಿದರು.

"ಯಾಕಿಲ್ಲ ? ಅವನೇ ದಿನಾ ಬೆಳಿಗ್ಗೆ ಬೇಗ ಎದ್ದು ಸ್ನಾನ ಮಾಡಿ ಓದಿಕೊಳ್ಳುತ್ತಾನೆ. ಆಮೇಲೆ ಆಡುತ್ತಾನೆ" ಎಂದು ಜಮೀನುದಾರರು ಹೆಮ್ಮೆ ಯಿಂದ ಮಗನನ್ನು ಕರೆದು, "ಇಕೋ, ಇವರು ನಿನಗೆ ದೊಡ್ಡಪ್ಪನಾಗುತ್ತಾರೆ. ನಿನ್ನನ್ನು ನೋಡಲು ಬಂದಿದ್ದಾರೆ. ಅವರ ಪಾದಕ್ಕೆ ನಮಸ್ಕಾರ ಮಾಡು" ಎಂದು ಹೇಳಿದರು.

ಗೋಪಾಲನು ನಿರ್ಲಕ್ಷ್ಯದಿಂದ ತಲೆಯಾಡಿಸಿ, "ಊಹೂಂ, ನಾನು ದಿನಕ್ಕೆ ಒಂದುಸಾರಿ ಮಾತ್ರ ನಮಸ್ಕಾರ ಮಾಡೋದು. ಇವತ್ತು ನಿಮಗೆ ನಮಸ್ಕಾರ ಮಾಡಿಯಾಯ್ತು. ಇನ್ನು ನಾಳೆ ನಿಮಗೆ ಮಾಡದೆ ಅವರಿಗೇ ಮಾಡ್ತೇನೆ !" ಎಂದು ಹೇಳಿ ತುರ್ರನೆ ಓಡಿದನು.



ಜಮೀನುದಾರರಿಗೆ ತಲೆ ತೆಗೆದ ಹಾಗಾಯಿತು. ಅವರು ಆಶ್ರಿತ ಯುವಕನನ್ನು ಕರೆದು, "ನೀನು ಗೋಪಾಲನಿಗೆ ಕಲಿಸುವ ಬುದ್ಧಿಯಿಂದಾಗಿ, ನಮ್ಮ ಬಂಧುಗಳ ಮುಂದೆಯೇ ನನ್ನ ಮರ್ಯಾದೆ ಹೋಗುತ್ತದೆ" ಎಂದು ನಡೆದ ಸಂಗತಿಯನ್ನು ಹೇಳಿದರು.

ಯುವಕನು ಗೋಪಾಲನ ಬಳಿಗೆ ಹೋಗಿ "ನೀನು ಮಾಡಿದ್ದು ಏನೋನೂ ಸರಿಯಲ್ಲ. ನಿನ್ನಿಂದಾಗಿ ನಾನು ಬೈಗುಳು ತಿನ್ನಬೇಕಾಯಿತು. ದೊಡ್ಡವರಿಗೆ ನಮಸ್ಕಾರ ಮಾಡಬೇಕಾದುದು ಮರ್ಯಾದೆ. ಅವರಿಂದ ಆಶೀರ್ವಾದ ಪಡೆಯುವುದು ನಿನಗೂ ಒಳ್ಳೇದು. ಇನ್ನು ಹೀಗೆ ನಡೆದುಕೊಳ್ಳಬೇಡ !" ಎಂದು ಬುದ್ಧಿ ಹೇಳಿದನು.

ಗೋಪಾಲನು ನಿರ್ಲಕ್ಷ್ಯದಿಂದ "ನಾನು ಹೇಳಿದ ಮಾತು ತಪ್ಪೋಲ್ಲ. ಒಂದುಸಾರಿ ಮಾತ್ರ ಅಂದರೆ ಒಂದುಸಾರಿ ಮಾತ್ರವೇ !" ಎಂದ ಗೋಪಾಲ ಮೊಂಡುತನವಾಗಿ.

"ದೊಡ್ಡ ಹರಿಶ್ಚಂದ್ರನಾದೆಯೋ? ನೀನು ಹೇಳಿದ ಮಾತು ತಪ್ಪುವುದಿಲ್ಲವೇನು ? ಖಂಡಿತವೇ? ತಪ್ಪಿದರೆ?" ಎಂದು ಯುವಕನು ಗೋಪಾಲನೊಂದಿಗೆ ಸವಾಲಿಗೆ ನಿಂತನು,

"ತಪ್ಪಿದರೆ ಆಮೇಲೆ ನೀನು ಹೇಗೆ ಹೇಳುವಿಯೋ ಹಾಗೆಲ್ಲಾ ಮಾಡುತ್ತೇನೆ" ಎಂದ ಗೋಪಾಲ.

ಯುವಕನಿಗೆ ಗೋಪಾಲನನ್ನು ಬದಲಾಯಿಸುವ ಉಪಾಯವೇನೆಂದು ಸ್ಫುರಿಸಿತು. ಆ ದಿನವೇ ಅವನು ಆಟದ ನೆವದಲ್ಲಿ ಗೋಪಾಲನ ಶರೀರದ ಮೇಲೆ ಕೊಳೆ ಸೇರುವಂತೆ ಮಾಡಿದನು. ಗೋಪಾಲನ ಶರೀರದಿಂದ ದುರ್ವಾಸನೆ ಹೊಡೆಯತೊಡಗಿತು. ಆಟದ ಹುಮ್ಮಸ್ಸಿನಲ್ಲಿ ಗೋಪಾಲನಿಗೆ ಆ ಸಂಗತಿ ಕೂಡಲೇ ಗೊತ್ತಾಗಲಿಲ್ಲ.

ಯುವಕನು ಗೋಪಾಲನೊಂದಿಗೆ "ಬಾ, ನದಿಗೆ ಹೋಗಿ ಸ್ನಾನ ಮಾಡೋಣ" ಎಂದನು.

"ಸ್ನಾನ ಹೇಗೆ ಮಾಡಲಿ ? ಇವತ್ತು ಸ್ನಾನ ಮಾಡಿ ಆಯಿತಲ್ಲ ? ಇನ್ನು ಸ್ನಾನ ನಾಳೇನೇ !" ಎಂದ ಗೋಪಾಲ.

ಯುವಕನೊಬ್ಬನೇ ನದಿಯಲ್ಲಿ ಸ್ನಾನ ಮಾಡಿ ಬಂದನು. ಗೋಪಾಲನು ಮಾತ್ರ ಹಾಗೇ ಮನೆಗೆ ಹೋದನು.

"ಏನೋ ಇದು ? ಮೈ ಪೂರಾ ದುರ್ವಾಸನೆ ! ಹೋಗಿ ಸ್ನಾನ ಮಾಡಿ ಬಾರೋ" ಎಂದಳು ಗೋಪಾಲನ ತಾಯಿ. ಗೋಪಾಲ ಕೇಳಲಿಲ್ಲ. ತನ್ನಿಂದ ಬಲವಂತವಾಗಿ ಸ್ನಾನ ಮಾಡಿಸಿದರೆ ತಾನು ಊಟ ಮಾಡಲಾರೆನೆಂದು ಹಟ ಹಿಡಿದ.

"ಮತ್ತೆ ನಿನ್ನ ಜತೇಲಿ ನಾವು ಹೇಗೆ ಊಟ ಮಾಡೋದು ? ಮನೇಲಿ ನೆಂಟರೊಬ್ಬರು ಬೇರೆ ಇದ್ದಾರೆ ! ಹಟ ಮಾಡಬೇಡ್ವೋ !" ಎಂದಳು ತಾಯಿ.

ಆದರೂ ಗೋಪಾಲ ಮಿಾಯಲು ಒಪ್ಪದೆ, ಬೇರೆ ಕುಳಿತು ಊಟ ಮಾಡಿದ. ಕೊಳೆ ಮೈಯಿಂದ

ಮಲಗಿದರೆ ಹಾಸಿಗೆ ಹಾಳಾಗುತ್ತದೆಂದಾಯಿತು. ಅದಕ್ಕಾಗಿ ನೆಲದ ಮೇಲೆ ಮಲಗಿ ಬೆಳಗು ಮಾಡಿದ. ಮರುದಿನವಷ್ಟೇ ಅವನು ಸ್ನಾನ ಮಾಡಿದ್ದು!

ಅವನ ಹಟ ಅಷ್ಟು ಗಟ್ಟಿಯಾದುದೆಂದು ಯುವಕನು ಅಂದುಕೊಂಡಿರಲಿಲ್ಲ. ತನ್ನ ಉಪಾಯವು ವ್ಯರ್ಥವಾದ ಸಂಗತಿಯನ್ನು ಅವನು ಜಮೀನುದಾರನೊಂದಿಗೆ ಹೇಳಿದನು.

ತನ್ನ ಮಗನು ಎಲ್ಲರೊಂದಿಗೆ ಕೂಡದೇ ಬೇರೆ ಕುಳಿತು ಊಟ ಮಾಡಿದನೆಂದು ತಿಳಿದು ಜಮೀನುದಾರರು ನೊಂದುಕೊಂಡು, "ಇನ್ನೆಂದಿಗೂ ಇಂತಹ ಪ್ರಯೋಗಗಳನ್ನು ಮಾಡಬೇಡ. ಅವನು ದಾರಿಗೆ ಬಾರದಿದ್ದರೆ ಬೇಡ. ಹೇಗೋ ಸಂತೋಷವಾಗಿದ್ದರೇನೇ ಸಾಕು" ಎಂದರು.

ಆದರೆ ಗೋಪಾಲನು ಸರಿದಾರಿಗೆ ಬರಲೇ ಬೇಕಾದುದು ಆ ಆಶ್ರಿತ ಯುವಕನಿಗೆ ಅಗತ್ಯವಾಗಿತ್ತು. ಅವನು ಸರಿದಾರಿಗೆ ಬರದಿದ್ದರೆ ಜಮೀನುದಾರರು ಅವನನ್ನು ಅಲ್ಲಿ ಶಾಶ್ವತವಾಗಿ ಇಟ್ಟುಕೊಳ್ಳಲಾರರು. ಈ ಜಮೀನುದಾರರು ಮಾಡುವ ಅತಿ ಪ್ರೀತಿಯಿಂದಲೇ ಗೋಪಾಲನು ಕೆಟ್ಟುಹೋಗುತ್ತಿರುವುದೆಂದು ಯುವಕನಿಗೆ ಚೆನ್ನಾಗಿ ಅರ್ಥವಾಯಿತು.

ಹೀಗಿರುವಾಗ ಆ ದೇಶವನ್ನಾಳುವ ರಾಜನು ಆ ಗ್ರಾಮದ ಬಳಿಗೆ ಬಂದು ಮೊಕ್ಕಾಂ ಹಾಕಿದನು. ಊರೊಳಗಿನ ಪ್ರಮುಖರೆಲ್ಲರೂ ತಮ್ಮ ತಮ್ಮ ಕುಟುಂಬ ಸಹಿತರಾಗಿ ಕಾಣಿಕೆಗಳೊಂದಿಗೆ ಮಹಾರಾಜನ ದರ್ಶನ ಮಾಡಿಕೊಳ್ಳುತ್ತಿದ್ದರು. ಜಮೀನುದಾರನು ಕೂಡಾ ಕುಟುಂಬ ಸಮೇತನಾಗಿ, ಯುವಕನನ್ನೂ ಕರೆದುಕೊಂಡು ರಾಜನ ದರ್ಶನಕ್ಕೆ ಹೋದನು.

ಜಮೀನುದಾರನು ಕೊಟ್ಟ ಕಾಣಿಕೆಗಳು ರಾಜನನ್ನು ತುಂಬಾ ಮೆಚ್ಚಿಸಿದುವು. ಆ ಸಮಯದಲ್ಲಿ ಯುವಕನು ಗೋಪಾಲನೊಂದಿಗೆ, "ಇವರೇ ನಮ್ಮನ್ನಾಳುವ ಮಹಾರಾಜರು. ಇವರಿಗೆ ನಮಸ್ಕಾರ ಮಾಡು" ಎಂದನು.

ಗೋಪಾಲನು ತನ್ನ ಅಭ್ಯಾಸದ ಪ್ರಕಾರ, "ಊಹುಂ. ಬೆಳಿಗ್ಗೆ ಅಪ್ಪನಿಗೆ ಮಾಡಿಯಾಯ್ತು



ಇನ್ನು ಮಾಡೋಲ್ಲ" ಅಂದನು. ತುಂಟತನದಿಂದ. ಅದನ್ನು ನೋಡಿ ಮಹಾರಾಜನ ಕಣ್ಣುಗಳಲ್ಲಿ ಕೋಪದ ಕೆಂಬಣ್ಣವೇರಿತು.

"ಅದೇನನ್ನುವಿ ? ಅಪ್ಪನಿಗೆ ನಮಸ್ಕಾರ ಮಾಡಿದ ರಾಯಿತೆ ? ರಾಜನಾದ ನನಗೆ ನಮಸ್ಕಾರ ಮಾಡ ಬಾರದೂ ಅಂತ ಯಾರು ನಿನಗೆ ಈ ದುರ್ಬುದ್ಧಿ ಕಲಿಸಿದ್ದು ? ಏನಿದು ವಿಚಿತ್ರ ?" ಎಂದನು ರಾಜ.

ರಾಜನಿಗೆ ತನ್ನ ಮಗನ ಮೇಲೆ ಬಂದ ಕೋಪವು ಎಂತಹ ವಿಷಮ ಪರಿಣಾಮಕ್ಕೆ ಹೋಗುವುದೋ ಎಂದು ಜಮೀನುದಾರರು ಹೆದರಿ, ಕೈಯೆತ್ತಿ ಅಂಗೈ ಬಿಡಿಸಿ ತನ್ನ ಮಗನ ದವಡೆಯ ಮೇಲೆ ಒಂದೇಟು ಹೊಡೆದು, "ನಿನ್ನ ತುಂಟತನಕ್ಕೆ ಹದ್ದೇ ಇಲ್ಲದೆ ಹೋಯಿತು. ದೇವರಂಥಾ ಮಹಾರಾಜರಿಗೆ ನಮಸ್ಕಾರ ಮಾಡಲಾರೆಯೇನು ? ಮೊದಲು ಅವರ ಪಾದಗಳ ಮೇಲೆ ಬೀಳು !" ಎಂದರು.

ತಂದೆಗೆ ತನ್ನ ಮೇಲೆ ಅಷ್ಟು ಕೋಪ ಬರವು ದೆಂದಾಗಲೀ, ತನ್ನನ್ನು ಇಷ್ಟು ಜೋರಾಗಿ ಹೊಡೆ ಯುವರೆಂದಾಗಲೀ ಊಹಿಸಿರದ ಗೋಪಾಲನು ತುಂಬಾ ಹೆದರಿ ಮಹಾರಾಜರ ಕಾಲಿನ ಬುಡದಲ್ಲಿ ಬಿದ್ದು ನಮಸ್ಕರಿಸಿದನು.

ರಾಜನು ಪ್ರಸನ್ನನಾಗಿ ಸಮಾಧಾನವಾಗಿ ಮಾತಾಡಿ ದನು. ಅಲ್ಲಿಂದ ಮನೆಗೆ ಮರಳಿದ ಮೇಲೆ ಯುವಕನು ಗೋಪಾಲನಿಗೆ ಅವನು ಮಾಡಿದ ಪ್ರತಿಜ್ಞೆಯನ್ನು ನೆನಪು ಬರಿಸಿದನು. "ಹೌದು. ಇನ್ನು ಮೇಲೆ ನೀನು ಹೇಳಿದ ಹಾಗೇ ಕೇಳುತ್ತೇನೆ" ಎಂದ ಗೋಪಾಲ.

ಯುವಕನು ಜಮೀನುದಾರರೊಂದಿಗೆ "ನಿಮ್ಮ ಮಗನು ಹೇಳಿದ ಮಾತು ತಪ್ಪುವವನಲ್ಲ. ಈ ದಿನದಿಂದ ನಾನು ಹೇಳಿದಂತೆ ಕೇಳುತ್ತಾನೆ. ಏಕೆಂದರೆ ಈ ದಿನ ಎರಡು ಸಾರಿ ನಮಸ್ಕಾರ ಮಾಡಿದನಷ್ಟೇ ? ಗೋಪಾಲನ ವೈಖರಿ ಎಷ್ಟೊಂದು ತೀವ್ರವಾಗಿ ತ್ತೆಂದು ಇವತ್ತು ನಿಮಗೇ ಗೊತ್ತಾಯಿತು. ನಿಮ್ಮ ಮಗನನ್ನು ಕಾಪಾಡಲು ಬೇರೆ ದಾರಿ ಇಲ್ಲ ಎಂಬಲ್ಲಿಯ ವರೆಗೂ ನೀವು ಅವನ ಮೇಲೆ ಕೈ ಎತ್ತಲಿಲ್ಲ. ಈ ಸಂಗತಿ ತಿಳಿದೇ ನಾನು ಈ ದಿನ ಹಾಗೆ ಪ್ರವರ್ತಿಸ ಬೇಕಾಗಿ ಬಂತು. ನಿಮ್ಮ ಮನಸ್ಸಿಗೆ ನಾನು ಕಷ್ಟ ಕೊಟ್ಟಿದ್ದರೆ ನನ್ನನ್ನು ಕ್ಷಮಿಸಿರಿ" ಎಂದನು.

ಯುವಕನು ಗೋಪಾಲನನ್ನು ರಾಜನಿಗೆ ಪರಿಚಯ ಮಾಡಿಸಿದ ಮೂಲಕವಾಗಿಯೇ ಗೋಪಾಲನನ್ನು ಹೊಡೆದೆನೆಂದು ಜಮೀನುದಾಗರಿಗೂ ಗೊತ್ತಾ ಯಿತು. ಆದರೂ ಗೋಪಾಲನು ಹೇಳಿದ ಮಾತಿ ನಂತೆ ನಡೆದು ಬುದ್ಧಿವಂತನಾಗುವುದರಿಂದ, ಜಮೀನು ದಾರರೂ ತಾನು ಹೇಳಿದ ಮಾತಿನಂತೆ ಆ ಯುವಕ ನನ್ನು ತಮ್ಮಲ್ಲೇ ಇಟ್ಟುಕೊಂಡರು.






# ತಾಯಿಯ ಋಣ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಂದು ಹೋರಿಕರುವಾಗಿ ಜನ್ಮವೆತ್ತಿದನು. ಅದು ನಿಗಿ ನಿಗಿ ಹೊಳೆಯುವ ಕಪ್ಪು ಬಣ್ಣದಿಂದ ನೋಡಲು ತುಂಬಾ ಮುದ್ದಾಗಿದ್ದಿತು. ಅದರ ಸೌಂದರ್ಯದ ಮೈ ಮಾಟವನ್ನು ನೋಡಿ ಅದರ ಒಡೆಯನು ಮಾತ್ರವಲ್ಲದೆ, ಇತರರೂ ಮೆಚ್ಚಿಕೊಳ್ಳುತ್ತಿದ್ದರು.

ಆ ಹೋರಿ ಕರುವನ್ನು ಸಾಕಿಕೊಳ್ಳುವ ಅದರ ಒಡೆಯನು ಒಂದು ಮನೆಯ ಭಾಗದಲ್ಲಿ ಬಾಡಿಗೆಗೆ ಇದ್ದನು. ಆ ಮನೆಯ ಯಜಮಾನಿ ಒಬ್ಬಳು ವೃದ್ಧೆ. ಕೆಲವು ದಿನಗಳ ಮೇಲೆ ಹೋರಿ ಕರುವಿನ ಒಡೆಯನಿಗೆ ಊರಿನಿಂದ ಹೊರಟು ಹೋಗ ಬೇಕಾಗಿ ಬಂತು. ಹಾಗೆ ಅವನು ಹೊರಟು ಹೋಗುವಾಗ, ತಾನು ಮನೆಯೊಡತಿಗೆ ಕೊಡಬೇಕಾದ ಬಾಡಿಗೆಯ ಲೆಕ್ಕದಲ್ಲಿ ಹೋರಿಕರುವನ್ನು ಕೂಡಾ ಆ ವೃದ್ಧೆಗೇ ಕೊಟ್ಟು ಹೊರಟುಹೋದನು.

ಊರವರೆಲ್ಲಾ ಆ ವೃದ್ಧೆಯನ್ನು ದೊಡ್ಡಮ್ಮ ನೆಂದೇ ಕರೆಯುತ್ತಿದ್ದರು. ಆಕೆಗೆ ತನ್ನವರೆನ್ನಲು ಯಾರೂ ಇರಲಿಲ್ಲ. ಅವಳಿಗೆ ಆ ಹೋರಿ ಕರುವಿನ ಮೇಲೆ ತುಂಬಾ ಅಚ್ಚೆ ಇದ್ದಿತು. ಅದನ್ನೇ ತನ್ನ ಮಗನ ಹಾಗೆ ನೋಡಿಕೊಳ್ಳ ತೊಡಗಿದಳು.

ಅಕ್ಕಿ ತೊಳೆದ ಅಕ್ಕಚ್ಚನ್ನೂ ಗಂಜಿ ನೀರನ್ನೂ ಬೆರೆಸಿ ಅದಕ್ಕೆ ತೌಡು ಹಾಕಿ, ಹಿಂಡಿ ಸೇರಿಸಿ ಒಳ್ಳೆಯ ಕಲಗಚ್ಚನ್ನು ದೊಡ್ಡಮ್ಮನು ಆ ಕಪ್ಪು ಹೋರಿಗೆ ಕುಡಿಸುತ್ತಿದ್ದಳು. ದಿನಾ ಕಾಲುವೆಗೆ ಕರೆದೊಯ್ದು ಹುಲ್ಲಿನಿಂದ ಅದರ ಶರೀರವನ್ನು ತಿಕ್ಕಿ ತೊಳೆದು ಶುಭ್ರವಾಗಿ ಸ್ನಾನಮಾಡಿಸುವಳು. ಹೀಗೆಲ್ಲಾ ಅಕ್ಕರೆಯಿಂದ ಅದನ್ನು ಪೋಷಿಸುವ ದೊಡ್ಡಮ್ಮ ಒಂದು ದಿನವೂ ಅದನ್ನು ಮರದ ಗೂಟಕ್ಕೆ ಕಟ್ಟಿದವಳಲ್ಲ. ಅದು ಕೂಡಾ ಅವಳನ್ನು ಬಿಟ್ಟು ಎಲ್ಲಿಗೂ ಹೋಗುತ್ತಿರಲಿಲ್ಲ. ಎಲ್ಲಿಂದಲೂ ಅದರ ಮೇಲೆ ಯಾವ ಪುಕಾರೂ ಬರಲಿಲ್ಲ.

ಹೀಗೆ ಬೆಳೆಯುತ್ತಿದ್ದಂತೆ ಆ ಕಪ್ಪು ಹೋರಿ ಗಟ್ಟಿಮುಟ್ಟಾದ ಗೂಳಿಯಾಯಿತು. ಅದರ ತಲೆಯಲ್ಲಿ ಪುಟ್ಟ ಪುಟ್ಟ ಗಟ್ಟಿ ಕೊಂಬುಗಳು ಮೊಳೆತವು, ಅದು ಜತೆ ಪಶುಗಳೊಂದಿಗೆ ಊರೊಳಗೆಲ್ಲಾ ಸ್ವೇಚ್ಛೆಯಾಗಿ ತಿರುಗುತ್ತಿತ್ತು. ಹುಡುಗ ಹುಡುಗಿಯರು ಅದರ ಮೇಲೆ ಏರಿಕೊಂಡು ಸವಾರಿ ಮಾಡುತ್ತಿದ್ದರು. ಅದರ

ಗಂಭೀರವಾದಗಂಗೆದೊಗಲಸನ್ನು ನೀವುತ್ತಾ ಆಟವಾಡು ತ್ತಿದ್ದರು. ಅದು ಏನೂ ಮಾಡದೆ ಸುಮ್ಮನಿರುತ್ತಿತ್ತು.

ಒಂದು ದಿನ ಆ ಕಪ್ಪುಗೂಳಿ ತನ್ನೊಳಗೇ ಹೀಗೆ ಹೇಳಿಕೊಂಡಿತು: "ನನ್ನನ್ನು ಮಗನ ಹಾಗೆ ಪ್ರೀತಿ ಯಿಂದ ಪೋಷಿಸುವ ದೊಡ್ಡಮ್ಮ ತುಂಬಾ ಬಡವಳು, ನನಗಾಗಿ ತುಂಬಾ ಶ್ರಮಪಡುತ್ತಾಳೆ, ನಾನು ಆಕೆಗೆ ಸ್ವಲ್ಪವಾದರೂ ಧನ ಸಂಪಾದಿಸಿಕೊಡಲು ಸಾಧ್ಯ ವಾದರೆ, ಅವಳ ಶ್ರಮವನ್ನು ಬಹಳ ಮಟ್ಟಿಗೆ ತಗ್ಗಿಸಿದವನಾಗುತ್ತೇನೆ, ತಾಯಿಯ ಋಣ ತೀರಿಸ ಬೇಕಾದುದು ಮಗನ ಕರ್ತವ್ಯವೂ ಹೌದು".

ಇಂತಹ ಆಲೋಚನೆ ಬಂದ ಮೇಲೆ ಆ ಕರಿಗೂಳಿ ಧನ ಸಂಪಾದಿಸುವ ಮಾರ್ಗವನ್ನು ಆಲೋಚಿಸಿ ಕೊಂಡಿದ್ದಿತು, ಹಾಗಿರುವಾಗ ಒುದು ದಿನ ಐನೂರು ಗಾಡಿಗಳಲ್ಲಿ ಧಾನ್ಯವನ್ನು ತುಂಬಿಸಿಕೊಂಡು ವರ್ತಕ ನೊಬ್ಬನು ಆ ಊರಿನ ಕಡೆಗೇ ಹೊರಟು ಬಂದನು. ದಾರಿಯಲ್ಲಿ ಯಾವ ತೊಂದರೆಯೂ ಇಲ್ಲದೆ ಆ ಊರಿನ ಬಳಿಗೆ ಬರುತ್ತಿದ್ದಂತೆ, ಒಂದು ಕಡೆ ಚಿಕ್ಕ ದೊಂದು ಒಣ ನದಿಯನ್ನು ದಾಟಬೇಕಾಯಿತು. ಆ ಪ್ರಾಂತವೆಲ್ಲಾ ಮರಳು ಮಯವಾಗಿತ್ತು.

ಗಾಡಿಗಳೆಲ್ಲಾ ನದಿಯ ಮರಳಿನಲ್ಲಿ ಕಷ್ಟದಿಂದ ಸಾಗುತ್ತಿರಲು, ಆಮೇಲೆ ಎತ್ತುಗಳು ಮುಂದುವರಿಯ ಲಾರದೆ ಹೋದುವು. ಊರೊಳಗಿನ ಎತ್ತುಗಳನ್ನು ತರಿಸಿ ಗಾಡಿಗಳನ್ನೆಲ್ಲಾ ಎಳೆಯಿಸಬೇಕೆಂದು ನೋಡಿದರೂ, ಆ ಪ್ರಯತ್ನವು ನಿಷ್ಫಲವಾಯಿತು.

ವರ್ತಕನು ಹಾಗೆ ಪರದಾಡಿಕೊಂಡಿರುವ ಸ್ಥಳಕ್ಕೆ ಸಮೀಪದಲ್ಲಿದ ಹುಲ್ಲುಗಾವಲಿನಲ್ಲಿರುವ ಪಶುಗಳ ಮಂದೆಯಲ್ಲಿ ಬೋಧಿಸತ್ವನಾದ ಕಪ್ಪುಗೂಳಿಯೂ ಮೇಯುತ್ತಿದ್ದಿತು. ಅಲ್ಲಿರುವ ಪಶುಗಳಲ್ಲಿ ತನ್ನ ಅಗತ್ಯಕ್ಕೆ ಬೀಳುವ ಎತ್ತುಗಳಿವೆಯೇನೋ ಎಂದು ನೋಡಲು ವರ್ತಕನು ಆ ಕಡೆಗೆ ಬಂದನು,

ಆ ವರ್ತಕನ ದೃಷ್ಟಿಯನ್ನು ಎಲ್ಲಕ್ಕಿಂತಲೂ ಬಲವಾಗಿ ಆಕರ್ಷಿಸಿದ್ದು ಕೊಬ್ಬಿ ಗಟ್ಟಿ ಮುಟ್ಟಾಗಿ ಕಾಣುವ ಕಪ್ಪುಗೂಳಿಯೇ. "ಈ ಕಪ್ಪುಗೂಳಿ ಸಾಮಾನ್ಯ ಎತ್ತಿನಂತೆ ಕಾಣುವುದಿಲ್ಲ, ಇದರ ಸಹಾಯ



ದಿಂದ ನನ್ನ ಬಂಡಿಗಳನ್ನು ಸುಲಭವಾಗಿ ನದಿ ದಾಟಿಸಿ ಬಿಡಬಹುದು" ಎಂದುಕೊಂಡನು ಆ ವರ್ತಕ.

ವರ್ತಕನು ಅಲ್ಲಿರುವ ಗೋಪಾಲಕ ಬಾಲರನ್ನು ಕರೆದು "ಎಲೋ, ಈ ಕಪ್ಪುಗೂಳಿ ಯಾರದು? ಇದನ್ನು ಸ್ವಲ್ಪ ಹೊತ್ತು ಬಾಡಿಗೆಗೆ ಕೊಡುವಿರಾ? ನನ್ನ ಧಾನ್ಯದ ಗುಡಿಗಳು ನದಿಯಲ್ಲಿ ಸಿಕ್ಕಿಕೊಂಡಿವೆ. ಅವುಗಳನ್ನು ನದಿ ದಾಟಿಸಬೇಕಾಗಿದೆ. ಕೇಳುವಷ್ಟು ಹಣ ಕೊಡುತ್ತೇನೆ" ಎಂದನು.

"ಅದಕ್ಕೇನೂ ಅಡ್ಡಿಯಿಲ್ಲ. ಆ ಗೂಳಿಯನ್ನು ತೆಗೆದುಕೊಂಡು ಹೋಗಿ ನಿಮ್ಮ ಕೆಲಸ ಮಾಡಿಸಿ ಕೊಳ್ಳಿ. ಅದಕ್ಕೆ ಹೆಸರಿಗೊಬ್ಬಳು ಯಜಮಾನಿ ಇದ್ದಾಳಾದರೂ, ಇದನ್ನು ಇಷ್ಟಪ್ರಕಾರ ತಿರುಗಲು ಬಿಟ್ಟಿದ್ದಾಳೆ. ಬಹಳ ಸಾಧು ಗೂಳಿಯಿದು. ತುಂಬ ಬಲಿಷ್ಠವಾಗಿಯೂ ಇದೆ" ಎಂದರು ಆ ಹುಡುಗರು. ವರ್ತಕನು ಆ ಗೂಳಿಯ ಬಳಿಗೆ ಹೋಗಿ ಬೆನ್ನುತಟ್ಟಿ, ಅದರ ಕೊರಳಿಗೆ ಹಗ್ಗ ಹಾಕಿ; ಅಲ್ಲಿಂದ ಎಳೆದುಕೊಂಡು ಹೋಗಲು ಪ್ರಯತ್ನಿಸಿದನು. ಆದರೆ ಕಪ್ಪುಗೂಳಿ ಒಂದಂಗುಲ ಕೂಡಾ ಕದಲಲಿಲ್ಲ. ಅದನ್ನು ಕದಲಿಸಲು ವರ್ತಕನಿಗಾಗಲೀ, ಅವನ ಕಡೆಯವರಿಗಾಗಲೀ ಸಾಧ್ಯವಾಗಲಿಲ್ಲ.

ವರ್ತಕನು ಅದರ ಭಾವನೆಯನ್ನು ನೋಡುತ್ತ ಸ್ವಲ್ಪ ಆಲೋಚಿಸಿದನು. "ಅದೇನೂ ನಮ್ಮಿಂದ ತಪ್ಪಿಸಿಕೊಳ್ಳಲು ನೋಡುವುದಿಲ್ಲ. ಪ್ರತಿಭಟಿಸುವುದೂ ಇಲ್ಲ. ಬಂಡೇಗಲ್ಲಿನ ಹಾಗೆ ನಿಂತಿದೆ. ಇದು ತನ್ನ ಕಷ್ಟಕ್ಕೆ ಪ್ರತಿಫಲ ಬಯಸುತ್ತದೆಂದು ಕಾಣುತ್ತದೆ" ಎಂದುಕೊಂಡು ಆ ಗೂಳಿಯ ಕಿವಿಯ ಹತ್ತಿರ ಹೋಗಿ, "ನಿನ್ನ ರೂಪರೇಖೆಗಳನ್ನು ನೋಡಿದರೆ ವೃಷಭರಾಜನಂತಿರುವೆ. ನನ್ನ ಐನೂರು ಗಾಡಿ ಗಳನ್ನೂ ನೀನು ನದಿಯ ಮರಳಿನಿಂದ ಪಾರು ಮಾಡಿ ಬಿಟ್ಟರೆ, ಒಂದೊಂದು ಗಾಡಿಗೆ ಎರಡೆರಡು ವರಹಗಳಂತೆ ಸಾವಿರ ದರಹಗಳನ್ನು ನಿನಗೆ ಬಹು ಮಾನ ಕೊಡುತ್ತೇನೆ" ಎಂದನು.

ಹಾಗಂದ ಕೂಡಲೇ ಆ ಕಪ್ಪುಗೂಳಿ ಕದಲಿ ನದಿಯಲ್ಲಿ ಸಿಕ್ಕಿಕೊಂಡಿರುವ ಮುಂದಿನ ಗಾಡಿಯ



ಬದಿಯಲ್ಲಿ ಹೋಗಿ ನಿಂತಿತು. ವರ್ತಕರ ಆಳುಗಳು ಅದನ್ನು ಆ ಗಾಡಿಗೆ ಕಟ್ಟಿದರು. ಕಪ್ಪುಗೂಳಿ ನಿರಾಯಾಸವಾಗಿ ಗಾಡಿಯನ್ನು ಆಚೆಯ ತೀರಕ್ಕೆ ಎಳೆದುಕೊಂಡು ಹೋಯಿತು. ಹೀಗೆಯೇ ಒಂದರ ಮೇಲೊಂದಾಗಿ ಐನೂರು ಗಾಡಿಗಳನ್ನೂ ಸ್ವಲ್ಪ ಹೊತ್ತಿನೊಳಗೆ ಆಚೆಯ ತೀರವನ್ನು ಸೇರಿಸಿಬಿಟ್ಟಿತು.

ಹೀಗೆ ಅದರಿಂದ ವರ್ತಕನ ಕೆಲಸ ಈಡೇರಿತು. ವರ್ತಕನು ದೊಡ್ಡದೊಂದು ಪಟ್ಟಿಯೊಳಗೆ ಐನೂರು ವರಹಗಳನ್ನು ಇಟ್ಟು, ಆ ಕಪ್ಪುಗೂಳಿಯ ಕೊರಳಿಗೆ ಕಟ್ಟಿದನು. ವರ್ತಕನ ಮೋಸವನ್ನು ತಿಳಿದ ಬೋಧಿಸತ್ವನು, "ಈ ವರ್ತಕನಿಗೆ ದುರ್ಬುದ್ಧಿ ಹುಟ್ಟಿತು. ಹೇಳಿದ ಮಾತು ತಪ್ಪಿದನು" ಎಂದುಕೊಂಡು ಅತ್ತ ಹೋಗಿ, ತಾನು ಮೊದಲು ಎಳೆದ ಗಾಡಿಗೆ ಅಡ್ಡವಾಗಿ ನಿಂತುಬಿಟ್ಟಿತು.

ಅದರ ರೀತಿಯನ್ನು ನೋಡಿದ ಕೂಡಲೇ, ಇದು ಸಾಧಾರಣ ಪಶುವಲ್ಲವೆಂದೂ, ಮಹಾಶಕ್ತಿಯ ದೈವಾಂಶದ್ದೆಂದೂ ವರ್ತಕನಿಗೆ ಅರ್ಥವಾಯಿತು. ಬೇಗ ಬೇಗನೆ ಮತ್ತೆ ಐನೂರು ವರಹಗಳನ್ನು ಇನ್ನೊಂದು ಪಟ್ಟಿಯೊಳಗಿಟ್ಟು, ಅದನ್ನು ಆ ಗೂಳಿಯ ಕೊರಳಿಗೆ ಕಟ್ಟುತ್ತ, "ಅಯ್ಯಾ, ನನ್ನನ್ನು ಕ್ಷಮಿಸು. ನಾನು ವಾಗ್ದಾನಮಾಡಿದಂತೆ ಸಾವಿರ ವರಹಗಳನ್ನೂ ನಿನ್ನ ಕೊರಳಿಗೆ ಕಟ್ಟಿದ್ದೇನೆ. ಇನ್ನು ನನ ಗಾಡಿಗಳು ಮುಂದೆ ಹೋಗಲು ದಾರಿಬಿಡುವೆಯಾ?" ಎಂದನು. ಕಪ್ಪುಗೂಳಿ ತಲೆಯಾಡಿಸುತ್ತಾ ಅಲ್ಲಿಂದ ಹೊರಟು, ಬೇಗಬೇಗನೇ ತನ್ನನ್ನು ಸಾಕುವ ದೊಡ್ಡಮ್ಮನ ಬಳಿಗೆ ಹೋಗಿ ಅತ್ಯುತ್ಸಾಹದಿಂದ ನಿಂತಿತು. ಐನೂರು ಗಾಡಿಗಳನ್ನು ಎಳೆದ ಕಾರಣ ದಿಂದ, ಅದು ತುಂಬಾ ಬಳಲಿದ್ದಿತು. ಅದರ ಶ್ವಾಸೋಚ್ಛ್ವಾಸಗಳಿಂದ ಅದನ್ನು ತಿಳಿದ ದೊಡ್ಡಮ್ಮ ಅದರ ಶರೀರವನ್ನು ಬಟ್ಟೆಯಿಂದ ಒರೆಸುತ್ತ ಕೊರಳನ್ನು ತಡವಿದಳು. ಅದರ ಕೊರಳಿನಲ್ಲಿರುವ ಪಟ್ಟಿಗಳನ್ನು ನೋಡಿ ಆಶ್ಚರ್ಯಪಡುತ್ತ ಬಿಚ್ಚಿದಳು. ಅವುಗಳಲ್ಲಿರುವ ವರಹಗಳನ್ನು ನೋಡಿ ಇನ್ನಿಷ್ಟು ಆಶ್ಚರ್ಯಪಡುವಾಗ, ಹಿಂದೆಯೇ ಬಂದ ಹುಡುಗರು ನಡೆದ ಸಂಗತಿ ಹೇಳಿದರು.

ದೊಡ್ಡಮ್ಮ ಕಣ್ಣೀರು ತುಂಬಿ ಗೂಳಿಯ ಮುಖವನ್ನು ತಡವುತ್ತ, "ಅಪ್ಪಾ, ನನಗಾಗಿ ಇಷ್ಟು ಶ್ರಮ ಪಟ್ಟೆಯಾ? ಈ ಹಣವನ್ನು ನಾನೇನು ಮಾಡಲಿ?" ಎಂದು ಕೂಡಲೇ ಹೋಗಿ, ಗೂಳಿಯ ಮೈನೋವು ಹೋಗಲು ಮದ್ದಿನೆಣ್ಣೆ ಹಚ್ಚಿ, ಬಿಸಿನೀರಿನಿಂದ ಮಾಯಿಸಿದಳು,

ಹೀಗೆ ಬೋಧಿಸತ್ವನು ತನ್ನನ್ನು ಪೋಷಿಸಿದ ತಾಯಿಯ ಋಣವನ್ನು ತೀರಿಸಿ, ಸ್ವಲ್ಪಕಾಲದ ಮೇಲೆ ಅವತಾರ ಮುಗಿಸಿದನು.





# ಮಹಾಕವಿ ಕಾಳಿದಾಸ

ಇನ್ನೂ ಕುಮಾರ ಪ್ರಾಯದಲ್ಲಿದ್ದ ಯುವರಾಜನೊಬ್ಬನು ತಾಯಿಯಬಳಿಗೆ ಬಂದು, "ಅಮ್ಮಾ, ಈ ಕ್ಷಣವೇ ನನಗೊಂದು ಕತ್ತಿಯನ್ನು ಕೊಡು" ಎಂದನು.. ಏಕೆಂದು ಕೇಳಿದಳು ತಾಯಿ. "ಯುದ್ಧಮಾಡಲಿಕ್ಕೆ", ಎಂದನು ಯುವರಾಜ. ತಾಯಿ ನಕ್ಕು "ಇನ್ನೂ ಸ್ವಲ್ಪ ದೊಡ್ಡವನಾಗು. ಕತ್ತಿ ಹಿಡಿಯುವ ವಯಸ್ಸು ಬರಲಿ" ಎಂದಳು.

ಆ ಯುವರಾಜನೇ ವಿಕ್ರಮಾದಿತ್ಯ. ಮಧ್ಯ ಏಷ್ಯಾದಿಂದ ದಾಳಿಬಂದು ಭಾರತದೇಶದಲ್ಲಿ ರಾಜ್ಯಗಳನ್ನು ಸ್ಥಾಪಿಸಿದ ಶಕರೆಂಬ ಭಯಂಕರ ಜಾತಿಯವರನ್ನು ಅವನು ಯುದ್ಧದಲ್ಲಿ ಮಣ್ಣು ಮುಕ್ಕಿಸಿ ಓಡಿಸಿದನು.







ಆಮೇಲೆ ವಿಕ್ರಮಾದಿತ್ಯನು ಅನೇಕ ಪರ ರಾಜ್ಯಗಳನ್ನು ಜಯಿಸಿ, ತನ್ನ ರಾಜಧಾನಿಯನ್ನು ಪಾಟಲೀಪುತ್ರದಿಂದ ಉಜ್ಜಯಿನಿಗೆ ಬದಲಾಯಿಸಿದನು. ಅವನ ಪಾಲನೆಯಲ್ಲಿ ಉಜ್ಜಯಿನಿ ದೊಡ್ಡ ದೊಡ್ಡ ಭವನಗಳಿಂದ ದೇವಾಲಯಗಳಿಂದ ವೈಭವವಾಗಿ ಶೋಭಿಸಿತು.



ವಿಕ್ರಮಾದಿತ್ಯನನ್ನು ಕುರಿತು ಅನೇಕ ಕಥೆಗಳಿವೆ. ಅದ್ಭುತ ದಂತ ಕಥೆಗಳು ಪ್ರಚಾರದಲ್ಲಿವೆ. ಅವುಗಳಲ್ಲಿ ಮುಖ್ಯವಾದುದು ಮಹಾಕವಿ ಕಾಳಿದಾಸನ ಉದಂತಗಳು. ವಿಕ್ರಮಾದಿತ್ಯನ ಕುಟುಂಬದವಳಲ್ಲದ, ಒಬ್ಬಾನೊಬ್ಬಳು ರಾಜಕುಮಾರಿ, ವಾದದಲ್ಲಿ ತನ್ನನ್ನು ಗೆದ್ದವನನ್ನೇ ಮದುವೆಯಾಗುವೆನೆಂದು ಹಟ ಹಿಡಿದಿದ್ದಳು. ಅನೇಕ ಮಂದಿ ಪಂಡಿತರು ಅವಳೊಂದಿಗೆ ವಾದಿಸಿ ಸೋತರು.

ಹೀಗೆ ಅವಮಾನಿತರಾದ ಪಂಡಿತರು ಆ ರಾಜಕುಮಾರಿಗೆ ಶತಮೂರ್ಖನೊಬ್ಬನು ಗಂಡನಾಗಬೇಕೆಂಬ ತಂತ್ರವನ್ನು ಮಾಡಿದರು. ಅವರಿಗೆ ಒಂದೆಡೆಯಲ್ಲಿ, ಮರದ ಕೊಂಬೆಯ ಮೇಲೆ ಕುಳಿತು ಕೆಳಗೆ ಕಡಿದು ಕೊಂಬೆಯೊಂದಿಗೆ ಬಿದ್ದ ಮೂರ್ಖನೊಬ್ಬನು ಸಿಕ್ಕಿದನು. ಅವನನ್ನು ಕರೆದುಕೊಂಡು ರಾಜಭವನಕ್ಕೆ ಹೋದರು.





ಆ ಪಂಡಿತರು ಚಮತ್ಕಾರವಾದ ಮಾತುಗಳಿಂದ ಆ ಮೂರ್ಖನು ದೊಡ್ಡ ಪಂಡಿತನೆಂದು ರಾಜಕುಮಾರಿಯನ್ನೂ, ಅವಳ ತಾಯಿತಂದೆಯರನ್ನೂ ನಂಬಿಸಿಬಿಟ್ಟರು. ರಾಜಕುಮಾರಿ ವಾದದಲ್ಲಿ ಸೋತದ್ದೂ ಆಗಿ, ಮದುವೆಯೂ ಆ ಮೂರ್ಖನೊಂದಿಗಾಯಿತು. ಆ ಮೇಲೆ ತನ್ನ ಗಂಡ ಮೂರ್ಖನೆಂದು ಗೊತ್ತಾಗಿ ರಾಜಕುಮಾರಿ ಅವನನ್ನು ರಾಜಭವನದಿಂದ ಹೊರಗೆ ಕಳುಹಿಸಿ ಬಿಟ್ಟಳು.

ಹೀಗೆ ಭಂಗಗೊಂಡ ಆ ಮೂರ್ಖನು, ಒಂದು ಕಾಳೀ ಆಲಯಕ್ಕೆ ಹೋಗಿ ಭಕ್ತಿ ಶ್ರದ್ಧೆಗಳಿಂದ ದೇವಿಯನ್ನು ಪ್ರಾರ್ಥಿಸಿದನು. ದೇವಿ ಪ್ರತ್ಯಕ್ಷಳಾಗಲಿಲ್ಲ. ಅವನು ಜೀವನದ ಮೇಲೆ ವಿರಕ್ತಿ ತಾಳಿ, ಪಕ್ಕದಲ್ಲಿದ್ದ ನದಿಗೆ ಧುಮುಕಿ ಸಾಯಲು ಸಿದ್ಧನಾದನು.





ಮರುಕ್ಷಣದಲ್ಲಿ ಸರಸ್ವತೀದೇವಿ ಅವನ ಮುಂದೆ ಪ್ರತ್ಯಕ್ಷಳಾಗಿ, "ನಿನಗೆ ಮುಂದಿನ ಏಳು ಜನ್ಮಗಳಲ್ಲಿಯೂ ಪಂಡಿತನಾಗುವ ಅದೃಷ್ಟವಿಲ್ಲ." ಎಂದಳು. ಅವನು ಮತ್ತೆ ನದಿಯಲ್ಲಿ ಹಾರಿ ಆತ್ಮಹತ್ಯ ಮಾಡಲು ನೋಡಿದನು.

ಆಗ ಕಾಳೀದೇವಿ ದಯಾರ್ದ್ರಳಾಗಿ ಸರಸ್ವತಿಗೆ ಪ್ರೇರೇಪಿಸಲು, "ನಿನ್ನ ಏಳು ಜನ್ಮಗಳನ್ನೂ ಕಾಳೀದೇವಿ ಉಪಸಂಹರಿಸಿಕೊಂಡಳು. ಅಂತೆಯೇ ನಿನಗೆ ನಾನು ಪಾಂಡಿತ್ಯ ಅನುಗ್ರಹಿಸಿದ್ದೇನೆ" ಎಂದು ಮಾಯವಾದಳು ಸರಸ್ವತಿ.





ಹೀಗೆ ಕಾಳೀದೇವಿಯ ಅನುಗ್ರಹದಿಂದ ಸರಸ್ವತಿಯ ಮೂಲಕ ಆ ಮೂರ್ಖನು ಪಂಡಿತನಾಗಿ ದೇವಿಯ ಸ್ತವನವನ್ನು ದಂಡಕವಾಗಿ ರಚಿಸಿದನು. ತನ್ನನ್ನು ಕಾಳಿದಾಸನೆಂದು ಕರೆಯಿಸಿಕೊಂಡನು. ಸೀದಾ ವಿಕ್ರಮಾದಿತ್ಯನ ಆಸ್ಥಾನಕ್ಕೆ ಹೋದನು.

ವಿಕ್ರಮಾದಿತ್ಯನ ಆಸ್ಥಾನದಲ್ಲಿ ನವರತ್ನಗಳೆಂದು ಕರೆಯಲ್ಪಡುವ ಪಂಡಿತ ವೃಂದದಲ್ಲಿ ಕಾಳಿದಾಸನು ಮೊದಲಿಗನೆನಿಸಿದ್ದಾನೆ. ಉಳಿದವರು ಧನ್ವಂತರಿ, ಕ್ಷಪಣಕ, ಅಮರಸಿಂಹ, ಶಂಖ, ಬೇತಾಳಭಟ್ಟ, ಘಟಕರ್ಪಕ, ವರಾಹಮಿಶ್ರ, ವರರುಚಿ.





ಒಂದು ಸಾರಿ ವಿಕ್ರಮಾದಿತ್ಯನಿಗೆ ಯಾವ ಕಾರಣದಿಂದಲೋ ಕಾಳಿದಾಸನ ಮೇಲೆ ಕೋಪ ಬಂದು ಅವನನ್ನು ರಾಮಗಿರಿ ಪ್ರಾಂತಕ್ಕೆ ಬಹಿಷ್ಕರಿಸಿದನೆಂದು ಐತಿಹ್ಯವಿದೆ. ಇಲ್ಲಿಯೇ ಕಾಳಿದಾಸನು ಸುಪ್ರಸಿದ್ಧವಾದ 'ಮೇಘಸಂದೇಶ' ಕಾವ್ಯವನ್ನು ಬರೆದನು. ಆ ಮೇಲೆ ರಾಜನು ಅವನ ಸ್ನೇಹವನ್ನು ಮರೆಯಲಾಗದೆ ಕರೆಯಿಸಿಕೊಂಡು, ದೊಡ್ಡದಾಗಿ ಸನ್ಮಾನಿಸಿದನು.

# ಬಹುಮಾನದಂಥ ಸುಳ್ಳು!

ಒಬ್ಬ ರಾಜನು ವಿನೋದಪ್ರಿಯನಾಗಿದ್ದನು. ಆದುದರಿಂದ ಅವನ ಆಸ್ಥಾನದಲ್ಲಿ ವಿದೂಷಕನಿಗೆ ಹೆಚ್ಚು ಗೌರವವಿದ್ದಿತು.

ಆದರಿಂದಾಗಿ ಆಸ್ಥಾನದಲ್ಲಿ ಪಂಡಿತನಾಗಿದ್ದ ರಾಮಶರ್ಮನಿಗೆ ವಿದೂಷಕನ ಮೇಲೆ ತುಂಬಾ ಅಸೂಯೆಯುಂಟಾಗಿತ್ತು. ಪಾಂಡಿತ್ಯವೆಂಬುದೇನೂ ಇಲ್ಲದ ಆ ವಿದೂಷಕನಿಗೆ ಮಹಾರಾಜನು ಮಾತು ಮಾತಿಗೂ ಅಗ್ರಸ್ಥಾನವೇಕೆ ಕೊಡುವನೋ ಎಂದು ರಾಮಶರ್ಮನಿಗೆ ಅರ್ಥವಾಗಲಿಲ್ಲ.

ಒಂದು ದಿನ ರಾಜನು ಸಭೆಯಲ್ಲಿದ್ದವರಿಗೆಲ್ಲಾ, ಒಂದು ಪಂದ್ಯ ಒಡ್ಡಿದನು.

ಆ ಪಂದ್ಯವು ಹೊಸ ರೀತಿಯದು. ಅದೇನಂದರೆ, ಯಾರು ದೊಡ್ಡ ಸುಳ್ಳು ಹೇಳುವರೋ ಅವರಿಗೆ ಬಹುಮಾನ ಕೊಡುವುದಾಗಿ ಹೇಳಿದನು ರಾಜ.

ಸಭೆಯಲ್ಲಿದ್ದವರು ತಮಗೆ ದೊಡ್ಡದಾಗಿ ತೋರಿದ ಒಂದೊಂದು ಸುಳ್ಳನ್ನು ಹೇಳ ತೊಡಗಿದರು. ಬಿಳೀ ಕಾಗೆಗಳನ್ನು ನೋಡಿದೆನೆಂದೂ, ಹಾರುವ ಮನುಷ್ಯರನ್ನು ಕಂಡಿದ್ದೇನೆಂದೂ, ಆನೆಯನ್ನು ನುಂಗುವ ಇರುವೆಯನ್ನು ಕಂಡೆನೆಂದೂ ಒಬ್ಬೊಬ್ಬರೂ ಹೇಳುವ ಸುಳ್ಳನ್ನು ಕೇಳುತ್ತಾ, ವಿದೂಷಕನು ಸುಮ್ಮನೆ ಕುಳಿತಿದ್ದ ರಾಮಶರ್ಮನನ್ನು ನೋಡಿ, "ಮಹಾಕವಿಗಳೇ! ನೀವು ಕೂಡಾ ಈ ಪಂದ್ಯದಲ್ಲಿ ಭಾಗವಹಿಸಿದರೆ ಚೆನ್ನಾಗಿರುತ್ತೆ" ಎಂದನು.

ರಾಮಶರ್ಮನು ಕೋಪದಿಂದ, "ಸುಳ್ಳು ಹೇಳುವುದು ನಮ್ಮ ವಂಶದಲ್ಲೇ ಯಾರಿಗೂ ತಿಳಿಯದು. ಅಂಥಾದ್ದೆಲ್ಲಾ ನನ್ನ ಮನೆಯ ಗಾಳಿಗೂ ಗೊತ್ತಿಲ್ಲ." ಎಂದನು.

ವಿದೂಷಕನು ರಾಜನನ್ನು ನೋಡಿ, "ಮಹಾರಾಜರೇ! ಬಹುಮಾನವನ್ನು ರಾಮಶರ್ಮರಿಗೇ ಕೊಡಿಸಿರಿ!" ಎಂದನು.

ಇಡೀ ಸಭೆಯೇ ನಗುವಿನಿಂದ ತುಂಬಿತು.





# ಕಲ್ಲುಸಕ್ಕರೆ

ಒಂದು ಊರಿನಲ್ಲಿ ಅಚ್ಯುತನೆಂಬವನು ಹೊಸತಾಗಿ ಆ ಊರಿಗೆ ಬಂದು ಒಂದು ಬಾಡಿಗೆಯ ಮನೆ ಮಾಡಿ ಉಳಿದುಕೊಂಡಿದ್ದನು. ಅವನಿಗೆ ಹೊಸತಾಗಿ ಆ ಊರಿನಲ್ಲಿ ಉದ್ಯೋಗ ದೊರಕಿತ್ತು. ಅವನು ದಿನಾ ಕಚೇರಿಗೆ ಹೋಗಿಬರುವ ದಾರಿಯಲ್ಲಿ ಒಂದು ಸಣ್ಣ ಹಂಚಿನ ಮನೆ ಇದ್ದಿತು. ಆ ಮನೆಯ ಜಗಲಿಯ ಮೇಲೆ ಐವತ್ತು ವಯಸ್ಸಿನ ಹೆಂಗುಸೊಬ್ಬಳು ಕುಳಿತಿರುತ್ತಿದ್ದಳು. ಅವಳು ದಿನಾ ಅಚ್ಯುತನನ್ನು ಏನೋ ಅಭಿಮಾನದಿಂದ ನೋಡುವಳು.

ಒಂದು ದಿನ ಸಾಯಂಕಾಲ ಅವಳು ದೇವಾಲಯದಿಂದ ತನ್ನ ಮನೆಗೆ ಬರುತ್ತ, ದಾರಿಯಲ್ಲಿ ಅಚ್ಯುತನನ್ನು ನೋಡಿ, "ಅಪ್ಪಾ, ಇದು ದೇವರ ಪ್ರಸಾದದ ಕಲ್ಲುಸಕ್ಕರೆ. ಕಣ್ಣಿಗೊತ್ತಿಕೊಂಡು ಸ್ವೀಕರಿಸಪ್ಪ" ಎಂದು ಕಲ್ಲುಸಕ್ಕರೆಯ ತುಣುಕೊಂದನ್ನು ಅಚ್ಯುತನ ಕೈಗೆ ಹಾಕಿದಳು.

ಅಚ್ಯುತನು ಭಕ್ತಿಭಾವದಿಂದ ಅದನ್ನು ಬಾಯಿಗೆ ಹಾಕಿಕೊಂಡನು. ಆಮೇಲೆ ಇಬ್ಬರೂ ಮಾತಾಡುತ್ತಾ ಮುಂದುವರಿದರು. ಆಗ ಅವಳು ಅಚ್ಯುತನೊಂದಿಗೆ "ನನಗೇನೋ ನಿನ್ನನ್ನು ನೋಡುತ್ತಿದ್ದರೆ ನನ್ನ ತಮ್ಮನನ್ನು ನೋಡಿದ ಹಾಗೇ ಕಾಣುತ್ತೆ. ಅವನು ಪಕ್ಕದಲ್ಲಿರುವ ಕೋಟೆಪಾಡಿಯಲ್ಲಿ ಶ್ಯಾನುಭಾಗನಾಗಿದ್ದಾನೆ. ಅವನ ಮೇಲೆ ನನಗೆ ಪಂಚಪ್ರಾಣಾಪ್ಪ. ಆದರೆ ನನ್ನ ಕರ್ಮ ಏನಂತ ಹೇಳಲಿ ? ನನ್ನ ನೆರಳು ಕೂಡಾ ಅವನಿಗೆ ಆಗೋದಿಲ್ಲ" ಎಂದು ತುಂಬಿಕೊಂಡ ಕಣ್ಣೀರನ್ನು ಸೆರಗಿನಿಂದ ಒತ್ತಿಕೊಂಡಳು.

ಹೀಗೆಲ್ಲಾ ಅವಳು ತನ್ನ ಗೋಳುಬಾಳನ್ನು ಕುರಿತು ಹೇಳಿದಳು. ಅವಳ ಹೆಸರು ಅಚ್ಚಮ್ಮನಂತೆ. ಗಂಡ ತೀರಿಹೋಗಿ ಐದು ವರ್ಷಗಳಾದುವಂತೆ. ಮಕ್ಕಳಿಲ್ಲ ಪಾಪ. ಗಂಡಹೋದ ಮೇಲೆ ತಮ್ಮನ ಮನೆಯಲ್ಲಿ ಕತ್ತೆ ಚಾಕರಿ ಮಾಡಿಕೊಂಡಿದ್ದವಳನ್ನು, ತಮ್ಮನ ಹೆಂಡತಿ ಹೀನವಾಗಿ ನೋಡುತ್ತ, ಗಂಡನ ಹತ್ತಿರ ಇಲ್ಲದ ಹೊಲ್ಲದ ಚಾಡೀ ಹೇಳುತ್ತಾಳೆ. ಅದನ್ನು ನಂಬಿ ತಮ್ಮನು ಅವಳನ್ನು ಹೊಡೆಯಲು ಬರುತ್ತಿದ್ದ. ಅದನ್ನೆಲ್ಲಾ ಸಹಿಸಿಕೊಂಡು ಅಚ್ಚಮ್ಮ ಅಲ್ಲಿಯೇ ತಮ್ಮನ ಮೇಲಿನ ವ್ಯಾಮೋಹದಿಂದ ಬಿದ್ದಿರುತ್ತಿದ್ದಳು. ಅಂಥವಳನ್ನು ಎರಡು ವರ್ಷಗಳ ಹಿಂದೆ ತಮ್ಮನು ಮನೆಯಿಂದ ಹೊರಗೆ ದೂಡಿಬಿಟ್ಟನು. ಈ ಊರಿಗೆ ಬಂದು ಈಗ ಆ ಮನೆಯಲ್ಲಿ

ಎಂ. ಕೆ. ಈಶ್ವರರಾವ್

ದ್ದಾಳೆ. ಗಂಡ ಕೊಟ್ಟ ಹಣ ಸ್ವಲ್ಪ ಅವಳ ಹತ್ತಿರ ಇರುವುದರಿಂದ ಹೇಗೋ ದಿನ ಹೋಗುತ್ತದೆ ಪಾಪ.

"ಅಪ್ಪಾ, ಈ ಒಂಟಿ ಜೀವನದ ಮೇಲೆ ನನಗೆ ಅಸಹ್ಯ ಬಂದಿದೆ. ಎಷ್ಟೇ ಹಿಂಸೆ ಕೊಟ್ಟರೂ ನನ್ನ ತಮ್ಮನನ್ನು ಮರೆಯಲಾಗದಿದ್ದೇನೆ. ನೀನಾದರೂ ಆಗಾಗ ನನ್ನ ಮನೆಗೆ ಬರುತ್ತಾ ಇದ್ದರೆ ನನಗೆ ಸಮಾಧಾನವಾಗಿರುತ್ತೆ" ಎಂದು ಕಣ್ಣೊತ್ತಿಕೊಂಡಳು ಅಚ್ಚಮ್ಮ. ಅವಳ ಮನೆ ಬಂದಿತು. "ಆಗಲಿ ಅಕ್ಕಾ! ಹಾಗೆಯೇ ಬರುತ್ತಾ ಇರುತ್ತೇನೆ" ಎಂದನು ಅಚ್ಯುತ.

ಅವಳು ತುಂಬಾ ಸಂತೋಷದಿಂದ "ಈ ದಿನ ನಿನಗೆ ಇಲ್ಲೇ ಊಟ!" ಎಂದು ಹೇಳಿ, ಆಗಿಂದಾಗಲೇ ಅಡಿಗೇಮಾಡಿ, ಒತ್ತಾಯಿಸಿ ಬಡಿಸಿ ಊಟಮಾಡಿಸಿದಳು. ಆಮೇಲೆ ಅಚ್ಯುತನು ಆಗಾಗ ಅಚ್ಚಮ್ಮನ ಮನೆಗೆ ಹೋಗಿ ಬರಲು ತೊಡಗಿದನು. ಒಂದೊಂದುದಿನ ಅವಳು ಕೂಡಾ ಅಚ್ಯುತನ ಮನೆಗೆ ಬಂದು, ಅವನು ಕಚೇರಿಗೆ ಹೋದ ಮೇಲೆ, ಮನೆ ಗುಡಿಸಿ ಒತ್ತರೆ ಮಾಡಿ, ಅವನ ಬಟ್ಟೆಗಳನ್ನು ಒಗೆದು ರಾತ್ರಿಗೆ ಅಡಿಗೆ ಕೂಡ ಮಾಡಿಡುವಳು.

ಒಂದುದಿನ ರಾತ್ರಿ ಅಚ್ಯುತನು ಮನೆಯೊಳಗಿರುವಾಗ, ಯಾರೋ ದಡದಡನೆ ಬಾಗಿಲು ಬಡೆದರು. ಅಚ್ಯುತನು ಬಾಗಿಲು ತೆಗೆದು ನೋಡಿದಾಗ ಅಚ್ಚಮ್ಮ ಹೆದರಿದವಳ ಹಾಗೆ ನಿಂತಿದ್ದಳು.

"ಏನಾಯಿತು ಅಚ್ಚಕ್ಕಾ? ಹೆದರುವುದೇಕೆ?" ಎಂದು ಅಚ್ಯುತನು ಅವಳನ್ನು ಒಳಗೆ ಕರೆದೊಯ್ದನು.

ಅಚ್ಚಮ್ಮ ಒಂದು ತಂಬಿಗೆಯ ನೀರನ್ನು ಗಳಗಳ ಕುಡಿದು, ದೊಡ್ಡ ಉಸಿರುಬಿಟ್ಟು ನಡೆದ ಸಂಗತಿಯನ್ನು ಹೇಳಿದಳು. ಸ್ವಲ್ಪ ಹೊತ್ತಿನ ಮೊದಲು ಅವಳು ಮಲಗಿಕೊಂಡಿದ್ದಾಗ ಮನೆಯ ಹಿಂಬದಿಯಲ್ಲಿ ಏನೋ ಶಬ್ದವಾಯಿತು. ಅವಳು ಕಿಟಕಿಯಿಂದ ನೋಡಿದಳು. ಅಲ್ಲಿ ಬೆಳೆಯಿಸಿದ್ದ ತರಕಾರೀ ಗಿಡಗಳನ್ನು ಎಮ್ಮೆಯೊಂದು ತಿನ್ನುವುದು



ಕಂಡಿತು. ಅವಳು ಹಿಂದಿನ ಬಾಗಿಲು ತೆರೆದು ಎಮ್ಮೆಯನ್ನು ಓಡಿಸಿ, ಹಿಂದಿರುಗುವಾಗ ಕುತ್ತಿಗೆಯ ಹತ್ತಿರ ತಣ್ಣಗೆ ಏನೋ ತಗಲಿತು.

ಅಚ್ಚಮ್ಮ ಹೆದರಿ ಕೂಗಲು ನೋಡುವಾಗ, ಮುಷ್ಟಿಯಲ್ಲಿ ಕತ್ತಿ ಹಿಡಿದಿದ್ದ ಕರ್ರಗಿನ ವ್ಯಕ್ತಿ, "ಶಬ್ದ ಮಾಡದೆ ಕುತ್ತಿಗೆಯಲ್ಲಿರುವ ಸರ, ಕೈಯಲ್ಲಿರುವ ಬಳೆ ಪೂರಾ ತೆಗೆದು ಕೊಟ್ಟುಬಿಡು. ಕೂಗಿದರೆ ಸಾಯುವಿ!" ಎಂದನು ಕಠೋರವಾಗಿ. ಅಷ್ಟರಲ್ಲಿ ಏನೋ ಪುಣ್ಯದಿಂದ ಗಸ್ತೀ ತಿರುಗುತ್ತಿದ್ದ ರಕ್ಷಕಭಟನು ಆ ಕಡೆಗೆ ಬರುವುದು ಕಂಡಿತು. ಕಳ್ಳ ಹಲ್ಲು ಕಡಿಯುತ್ತ, "ಈಗ ಬದುಕಿದಿ! ನಿನ್ನ ಚಿನ್ನದ ನಗಗಳನ್ನು ಬಿಡುವೆನೆಂದುಕೊಂಡೆಯಾ? ಮತ್ತೆ ಬರುತ್ತೇನೆ, ನೋಡ್ತಾ ಇರು!' ಎಂದು ಹೇಳಿ ಓಡಿಹೋಗಿಬಿಟ್ಟ. ಹೆದರಿಕೆಯಿಂದ ಪ್ರಾಣ ಬಿಡುವ ಅಂಚಿಗೆ ಬಂದ ಅಚ್ಚಮ್ಮ, ಆ ರಕ್ಷಕ ಭಟನಿಗೆ ತುಸು ಹಿಂದೆಯೇ ನಡೆಯುತ್ತ ಅಚ್ಯುತನ ಮನೆಗೆ ಬಂದುಬಿಟ್ಟಳು.



"ಇದು ನನ್ನ ಅಮ್ಮನ ನಗಗಳಪ್ಪಾ. ಯಾವಾಗಲೂ ನಾನು ಹಾಕ್ಕೊಳ್ಳೋದಿಲ್ಲ. ಇವತ್ತು ಗುಡೀಲಿ ಉತ್ಸವಾ ಅಂತ ಹುಚ್ಚುಕಟ್ಟಿ ಹಾಕ್ಕೊಂಡು ಬಿಟ್ಟೆ. ಗಂಡ ಸತ್ತವಳಿಗೆ ನಗಗಳು ಯಾಕೆ ಹೇಳಪ್ಪ. ನನ್ನ ಹೆಂಡ್ತಿಗೆ ಕೊಡೂ ಅಂತ ನನ್ನ ತಮ್ಮ ಕೇಳುತ್ತಾ ಇದ್ದ. ನನಗೆ ಇರುವ ಆಸ್ತೀ ಅಂದರೆ ಈ ನಗಗಳು ಮಾತ್ರವೇ. ಇವನ್ನು ಈಗಲೇ ಅವನಿಗೆ ಕೊಟ್ಟು ಬಿಟ್ಟರೆ ಸತ್ತರೆ ನನ್ನ ಶವ ಎತ್ತಲು ಕೂಡಾ ಯಾರೂ ಬಾರರು. ಇವನ್ನು ಕಳ್ಳ ಎಳೆದುಕೊಂಡು ಹೋದಾ ಅಂದರೆ ನನ್ನ ತಮ್ಮ ನಂಬಲಾರ." ಎಂದು ಅಚ್ಚಮ್ಮ ಕುತ್ತಿಗೆಯ ಸರವನ್ನೂ, ಕೈಯ ಬಳೆಗಳನ್ನೂ ತೆಗೆದು ಅಚ್ಯುತನ ಕೈಯಲ್ಲಿಟ್ಟು "ಸದ್ಯ ನಿನ್ನ ಹತ್ತಿರ ಇರಲಿ" ಎಂದಳು.

ಮತ್ತೆ ಎಂಟು ದಿನಗಳಲ್ಲೇ ಅವಳು ಅಚ್ಯುತ ನೊಂದಿಗೆ, "ಕಳ್ಳರ ಭಯದಲ್ಲಿ ನನಗೆ ರಾತ್ರಿ ನಿದ್ದೆ ಇಲ್ಲದಂತಾಯ್ತು! ಕಾವಲು ಕಾಯಲಾಗದ ಸೊತ್ತನ್ನು ಹತ್ತಿರ ಇಟ್ಟುಕೊಳ್ಳುವುದೂ ಸಮ, ನರಕದಲ್ಲಿ ಹೊರಳಾಡುವುದೂ ಸಮ. ಯಾಕೆ ಈ ಕರ್ಮ! ಆ ನಗಗಳನ್ನು ತಮ್ಮನ ಮುಖಕ್ಕೆ ಹಾಕಿ ಬರುತ್ತೇನೆ. ಹೆಂಡ್ತೀನ ಅಲಂಕಾರ ಮಾಡಿಕೊಳ್ಳೀ ಬಿಡು" ಎಂದಳು.

ಅಚ್ಯುತನು ಅವಳ ನಗಗಳನ್ನು ಕೊಡೋಣ ವೆಂದು ಪೆಟ್ಟಿಗೆ ತೆರೆದು ನೋಡಿದನು. ಅಲ್ಲಿ ಆ ನಗಗಳು ಇರಲಿಲ್ಲ. ಬಟ್ಟೆಬರೆಗಳನ್ನೆಲ್ಲಾ ತೆಗೆದು ಕೊಡರಿ ಗಾಳಿಸಿದರೂ ನಗಗಳು ಕಾಣಲಿಲ್ಲ.

ನಗಗಳು ಕಾಣದೆಹೋದುದನ್ನು ನೋಡಿ ಅಚ್ಚಮ್ಮ ಹಣೆ ಚಚ್ಚಿಕೊಂಡು ಗೋಳುಗರೆದಳು. "ಆ ಕಳ್ಳ ಭಂಡ ಹೇಳಿದ ಹಾಗೇ ಮಾಡಿಬಿಟ್ಟ ನಲ್ಲಾ! ನೀನು ಅಲಕ್ಷ್ಯವಾಗಿರುವ ಸಂಧಿ ಸಾಧಿಸಿ ಒಳಗೆ ಬಂದು ಎತ್ತಿಕೊಂಡು ಹೋದಾಂತ ಕಾಣುತ್ತೆ. ಮೂರು ಸಾವಿರ ಬೆಲೆಬಾಳುವಂಥ ನಗಗಳು. ಇನ್ನೆಲ್ಲಿಂದ ತರಲೀ? ನನ್ನ ತಮ್ಮನಿಗೆ ಈ ಸಂಗತಿ ತಿಳಿದರೆ ನನ್ನನ್ನು ಚಚ್ಚಿ ಕೊಚ್ಚಿಕೊಲ್ಲುವನಲ್ಲಾ! ಅವನು ಆ ಪಾಪ ಕಟ್ಟಿಕೊಳ್ಳುವುದಕ್ಕೆ ಮೊದಲೇ ಯಾವ ಬಾವೀಗಾದರೂ ಬಿದ್ದು ಸಾಯ್ತೇನೆ. ನನ್ನಂಥವಳು ಬದುಕಿದ್ದಾದರೂ ಏನು ಪ್ರಯೋಜನ?" ಎನ್ನುತ್ತಾ ತನ್ನ ಮನೆಗೆ ಹೋದಳು.

ಅಚ್ಯುತನಿಗೆ ಏನು ಮಾಡುವುದೆಂದೇ ಗೊತ್ತಾಗ ಲಿಲ್ಲ. ಮೂರು ಸಾವಿರ ಖರ್ಚುಮಾಡಿ ಅಂತಹ ನಗಗಳನ್ನೇ ಮಾಡಿಸಿಕೊಡುವ ಭಾರ ತನ್ನ ಮೇಲಿದೆ. ಆದರೆ ತನ್ನ ಹತ್ತಿರ ಅಷ್ಟು ಹಣವೆಲ್ಲಿದೆ? ದುಷ್ಟನಾದ ತಮ್ಮನ ಭೀತಿಯಿಂದ ಅಚ್ಚಮ್ಮ ಹೆದರಿ ಹೋಗಿದ್ದಾಳೆ! ಹೇಳಿದಹಾಗೆ ಸತ್ತು ಗಿತ್ತಾಳೇನೋ!

ಅಚ್ಯುತನು ಆಗಿಂದಾಗಲೇ ಕೋಟೆಪಾಡಿಗೆ ಹೋಗಿ, ಅವಳ ತಮ್ಮನೆನಿಸುವ ಶ್ಯಾನುಭಾಗನ

ಮನೆಯನ್ನು ಕಂಡುಹಿಡಿದು, ಅವನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಮುಖ್ಯ ಆ ನಗಗಳು ಕಾಣೆಯಾಗಿ ಹೋಗಲಿಕ್ಕೆ ನನ್ನ ಅಜಾಗ್ರತೆಯೇ ಕಾರಣವಾಯಿತು. ನೀವು ಅಚ್ಚಮ್ಮಕ್ಕನ ಮೇಲೆ ಏನೂ ಕೋಪಮಾಡದಿರಬೇಕು. ನಾನು ಕಂತುವಾರಿಯಾಗಿ ಆ ನಗಗಳ ಬಾಪತ್ತು ಹಣವನ್ನು ನಿಮಗೆ ಸಲಿಸುತ್ತಾ ಇರುತ್ತೇನೆ" ಎಂದು ತನ್ನ ಉದ್ಯೋಗದ ಕಚೇರಿ ಮುಂತಾದ್ದನ್ನೆಲ್ಲಾ ಹೇಳಿದನು.

ಅದನ್ನೆಲ್ಲಾ ಕೇಳಿಕೊಂಡ ಶ್ಯಾನುಭಾಗನು ಕಡೆಗೆ ಗಟ್ಟಿಯಾಗಿ ನಕ್ಕು, "ನನ್ನ ಅಕ್ಕ ಬುದ್ಧಿಯೂ ವಯಸ್ಸೂ ಮೀರುತ್ತಿದ್ದ ಹಾಗೆ ಚುರುಕುಗೊಳ್ಳುತ್ತಾಳಂತ ಕಾಣುತ್ತದೆ. ಅವಳ ಸಮಾಚಾರ ನಿನಗೆ ಒಂದಿಷ್ಟೂ ಗೊತ್ತಿಲ್ಲ!" ಎಂದು ಅಚ್ಚಮ್ಮನನ್ನು ಕುರಿತು ಹೇಳಿದನು.

ಚಿಕ್ಕತನದಿಂದಲೂ ಅಚ್ಚಮ್ಮನದು ಕಳ್ಳಬುದ್ಧಿಯೇ. ಗಂಡ ತೀರಿಹೋದ ಮೇಲೆ ತಮ್ಮನ ಮನೆಯಲ್ಲಿದ್ದ ಎರಡು ವರ್ಷವೂ ತುಂಬಾ ರಗಳೆ ಎಬ್ಬಿಸಿದ್ದಾಳೆ. ಮನೆಯಲ್ಲಿ ಆಗಾಗ ಅದೂ ಇದೂ ಕದ್ದುಕೊಳ್ಳುತ್ತಾಳೆ. ಮನೆ ಖರ್ಚಿಗಾಗಿ ತಂದ ಸಾಮಾನುಗಳನ್ನು ಕೂಡಾ ರಹಸ್ಯವಾಗಿ ಮಾರುತ್ತಿದ್ದಳು. ಮಕ್ಕಳನ್ನು ಕಂಡಾಬಟ್ಟೆ ಹೊಡೆಯುತ್ತಾಳೆ. ಗಂಡ ಹೆಂಡಿರ ನಡುವೆ ತಕರಾರು ತರುತ್ತಿದ್ದಳು.

ಸ್ವಂತ ಅಕ್ಕನಾದುದರಿಂದ ಶ್ಯಾನುಭಾಗನು ಹೇಗೋ ಸಹಿಸಿಕೊಂಡಿದ್ದನು. ಆದರೆ ಅವಳು ನೆರೆಕರೆ ಮನೆಗಳಲ್ಲಿ ಕೂಡಾ ಚಿಕ್ಕ ಚಿಕ್ಕ ಕಳ್ಳತನಗಳನ್ನು ಶುರುಮಾಡಿದಳು. ಇನ್ನು ಮರ್ಯಾದೆ ಹೋಗುತ್ತದಲ್ಲಾ ಎಂದುಕೊಂಡು ಮನೆಯಿಂದ ಹೊರಗೆ ಹಾಕಿಬಿಡಬೇಕಾಯಿತು. ಅವಳ ಖರ್ಚುಗಳಿಗೆ ತಿಂಗಳು ತಿಂಗಳೂ ಹಣ ಕಳುಹಿಸುತ್ತಿದ್ದಾನೆ ಶ್ಯಾನುಭಾಗ.



"ನನ್ನ ಅಕ್ಕ ನನ್ನ ಮೇಲೆ ದುಷ್ಪ್ರಚಾರ ಮಾಡಿ, ಇನ್ನೊಬ್ಬರ ಕನಿಕರವನ್ನು ಸಂಪಾದಿಸಿ ಅವರನ್ನು ಮೋಸಪಡಿಸುತ್ತಿದ್ದಾಳೆ. ನೀನು ಅವಳ ಮೇಲೆ ಕರುಣೆಯುಳ್ಳವನಾಗಿ ಆ ಮೂರು ಸಾವಿರವನ್ನು ಕೊಡದಿರಲಾರೆ ಎಂಬುದು ಅವಳ ಆಶೆ. ನಿನ್ನ ಹತ್ತಿರ ಹಣವಿದ್ದಿದ್ದರೆ ಕೊಟ್ಟೇ ಬಿಡುತ್ತಿದ್ದೆ ಹೌದಾ? ನಿನ್ನ ಮನೆಗೆ ಸರಾಗವಾಗಿ ಬಂದು ಹೋಗುವ ಅವಳೇ ನಿನ್ನ ಪೆಟ್ಟಿಗೆಯಿಂದ ಆ ನಗಗಳನ್ನು ತೆಗೆದಿದ್ದಾಳೆಂದು ಕಾಣುತ್ತದೆ. ಅವು ಗಿಲೀಟು ನಗಗಳೇ ಇದ್ದಾವು. ಅವಳಿಗೆ ನಾಟುವಹಾಗೆ ಬುದ್ಧಿ ಕಲಿಸಲು, ನಾನು ಹೇಳುವಹಾಗೆ ಮಾಡು" ಎಂದು ಅಚ್ಚಮ್ಮನ ತಮ್ಮನು ಅಚ್ಯುತನಿಗೆ ಹೀಗೆ ಮಾಡುವಂತೆ ರಹಸ್ಯವಾಗಿ ಹೇಳಿದನು.

ಅಚ್ಯುತನು ತನ್ನ ಬಿಡದಿಗೆ ಬಂದ ಕೂಡಲೇ ಅಲ್ಲೇ ಕಾದುಕೊಂಡಿದ್ದ ಅಚ್ಚಮ್ಮ ಆತುರದಿಂದ. "ನಗಗಳು ಸಿಕ್ಕಿದುವಾ ಅಪ್ಪಾ?" ಎಂದು ಕೇಳಿದಳು.

"ನಾನು ನಿಮ್ಮ ತಮ್ಮನ ಊರಿಗೇ ಹೋಗಿ ಬರುತ್ತಿದ್ದೇನೆ. ಇನ್ನೇನೂ ಭಯವಿಲ್ಲಕ್ಕ. ಆ ನಗಗಳ ಬೆಲೆ ಐದು ಸಾವಿರ ಅಂತ ನಿಮ್ಮ ತಮ್ಮ ವಾದ ಮಾಡಿದರು. ನಾನೂ ಒಪ್ಪಿ ಐದು ಸಾವಿರ ರೂಪಾಯಿ ನಿಮ್ಮ ತಮ್ಮನಿಗೆ ಕೊಟ್ಟು ಬಂದೆ. ಇನ್ನು ಅವರ ಭಯ ನಿಮಗಿಲ್ಲ." ಎಂದ ಅಚ್ಯುತ.

ಅದನ್ನು ಕೇಳಿ ಅಚ್ಚಮ್ಮ ಬೆಪ್ಪು ಬಡೆದವಳಾಗಿ ಏನೂ ಹೇಳದೆ ಹೊರಟು ಹೋಗಿಬಿಟ್ಟಳು. ಮಾರಣೇದಿನ ಅವಳು ಬೆಳಂಜಾಮದಲ್ಲೇ ಕೋಟೆ ಪಾಡಿಗೆ ಹೋಗಿ, ಬಾಗಿಲಲ್ಲೇ ನಿಂತ ತಮ್ಮನನ್ನು ನೋಡಿ, "ಏನೋ ಇದೂ ಪಾಪೀ! ಆ ಗಿಲೀಟು ನಗಗಳ ಬೆಲೆ ಐದು ಸಾವಿರವೇನು? ಆ ನಗಗಳನ್ನು ನೀನು ಕಣ್ಣಿಂದಾದರೂ ನೋಡಿದ್ಯಾ? ಅದು ನನಗೆ ಬರಬೇಕಾದ ಹಣ. ನಡುವಿನಲ್ಲಿ ಹದ್ದಿನ ಹಾಗೆ ನೀನು ಒಳಗೆ ಹಾಕ್ಕೊಳ್ತೀಯಾ? ಕೊಡು ಆ ಹಣ ವೆಲ್ಲಾ ಹೀಗೆ. ನಾನು ಸುಮ್ಮನೇ ಬಿಡೋವಳಲ್ಲಾ ನಿನ್ನಾ! ಒಳ್ಳೇ ಮಾತಿನಲ್ಲಿ ಕಕ್ಕು ಐದು ಸಾವಿರ!" ಎಂದಳು ಮಹಾ ಕೋಪದಿಂದ.

"ಏನಕ್ಕಾ, ಅರ್ಚನೆ ಮಾಡಿಕೊಂಡೇ ಬರುವಿಯಾ? ಹೌದು. ನೀನು ನನ್ನ ಅಕ್ಕ! ದೊಡ್ಡವಳು. ನಿನಗೆ ಈ ಅರ್ಹತೆ ಉಂಟು. ಆದರೆ ಒಂದು. ಈ ವಯಸ್ಸಿನಲ್ಲಿ ನೀನು ಹಣದ ಆಸೆಯಿಂದ ಮೋಸದ ಕೆಲಸಕ್ಕೆ ಇಳಿದಿಯಾದರೆ ಸತ್ತು ದೆವ್ವವೇ ಆಗುತ್ತೀ! ಹಾಯಾಗಿ ರಾಮಜಪ ಮಾಡುತ್ತಾ ನನ್ನ ಮನೇಲೇ ಇರು" ಎಂದನು ಅಚ್ಚಮ್ಮನ ತಮ್ಮ ಶ್ಯಾನುಭಾಗ.

ಅವಳ ಹಿಂದೆಯೇ ಗಾಡಿಯಲ್ಲಿ ಬಂದಿಳಿದ ಅಚ್ಯುತನು, ಆ ಮಾತುಗಳನ್ನೆಲ್ಲಾ ಕೇಳಿ ಮುಂದೆ ಬಂದು ಅಚ್ಚಮ್ಮನೊಂದಿಗೆ, "ನಿಮ್ಮಂಥವರನ್ನು ಅಕ್ಕಾ ಅಂತ ಕರೆದುದಕ್ಕೆ ನನಗೆ ನಾಚಿಕೆಯಾಗುತ್ತದೆ. ನಂಬಿಸಿ ಎಷ್ಟು ದೊಡ್ಡ ಮೋಸಮಾಡಿದಿರಿ?" ನನ್ನ ಪೆಟ್ಟಿಗೆಯಿಂದ ಆ ನಗಗಳನ್ನು ತೆಗೆದವರು ನೀವು ತಾನೆ?" ಎಂದನು ಅಸಹ್ಯದಿಂದ.

ಅಚ್ಚಮ್ಮನಿಗೆ ತಲೆ ತೆಗೆದ ಹಾಗಾಯಿತು. ಆಗ ಅವಳ ತಮ್ಮನು ಅಚ್ಯುತನನ್ನು ನೋಡಿ. "ನೀನಿನ್ನೂ ಲೋಕ ತಿಳಿಯದ ಹುಡುಗ. ಈ ಅನುಭವದಿಂದ ಸ್ವಲ್ಪ ಲೋಕಜ್ಞಾನ ಗೊತ್ತಾಯಿತಷ್ಟೆ? ಕಲ್ಲುಸಕ್ಕರೆಯೂ ಪಟಿಕಾರವೂ ನೋಡಲು ಒಂದೇ ವಿಧವಾಗಿರುತ್ತದೆ. ಯಾವುದು ಎಂತಹುದೆಂದು ಬಾಯಿಗಿಟ್ಟುಕೊಂಡರೆ ಗೊತ್ತಾಗುತ್ತದೆ. ಈ ಅಕ್ಕ ಮೊದಲು ನಿನಗೆ ಕಲ್ಲುಸಕ್ಕರೆ ಕೊಟ್ಟು ಸಿಹಿಯಾದಳು. ಆಮೇಲೆ ಇವಳು ತನ್ನ ಪಟಿಕಾರದ ಗುಣ ತೋರಿಸಿದಳು. ಜಾಗರೂಕತೆಯಿಂದಿರು" ಎಂದು ಎಚ್ಚರಿಸಿದನು.



# ಕೋಣ ಜಮೀನ್ದಾರ

ಬಿಕ್ಕೆಗೆ ಸಹಾ ಭಿಕ್ಷೆ ಹಾಕದ ಜಮೀನ್ದಾರನ ಮನೇ ಮುಂದೆ ಹಸಿದು ಬೆನ್ನಿಗೆ ಹೊಟ್ಟೆ ಹತ್ತಿಕೊಂಡ ಬಡ ಯಾಚಕನು "ಅಯ್ಯಾ! ಒಂದು ಮುಷ್ಟಿ ಭಿಕ್ಷೇ" ಎಂದು ಯಾಚಿಸಿದನು. ಜಮೀನ್ದಾರನು ನೌಕರರಿಂದ ಆ ಯಾಚಕನನ್ನು ಹೊರಗೆ ದೂಡಿಸಿ ಬಿಟ್ಟನು. ಯಾಚಕನು ಹೊಟ್ಟೇ ಉರಿಯಿಂದ "ನಿಮ್ಮ ಜಮೀನ್ದಾರ ನೊಬ್ಬ ಕೋಣಾಂತ ಕಾಣುತ್ತೆ" ಎಂದು ಬೈದನು.

ಆ ಬೈಗಳು ಕೇಳಿ ಜಮೀನ್ದಾರನು ಉರಿದುಬಿದ್ದು ಯಾಚಕನ ಮೇಲೆ ನ್ಯಾಯಾಸ್ಥಾನದಲ್ಲಿ ಫಿರ್ಯಾದಿ ಮಾಡಿದನು. ನ್ಯಾಯಾಧೀಶ ಆ ಯಾಚಕನನ್ನು ಕರೆಯಿಸಿ, "ಜಮೀನ್ದಾರರನ್ನು ಕೋಣ ಅಂತ ಬೈದೆಯಾ?" ಎಂದು ಪ್ರಶ್ನಿಸಿದನು.

ಹೌದೆಂದು ಯಾಚಕನು ಒಪ್ಪಿಕೊಂಡನು.

ನ್ಯಾಯಾಧಿಕಾರಿ ಯಾಚಕನಿಗೆ ಹತ್ತು ದಿನ ಕಾರಾಗೃಹವಾಸದ ಶಿಕ್ಷೆ ವಿಧಿಸಿದನು.

ಆಗ ಯಾಚಕನು ನ್ಯಾಯಾಧಿಕಾರಿಯನ್ನು ನೋಡಿ, "ಅಯ್ಯಾ ಜಮೀನ್ದಾರರನ್ನು ಕೋಣ ಅಂದುದನ್ನು ತಪ್ಪು ಅಂದಿರಿ. ಹಾಗಾದರೆ ಕೋಣವನ್ನು ಜಮೀನ್ದಾರ್ರೇ ಅನ್ನಬಹುದೇ? ಅದು ತಪ್ಪಾಗುತ್ತದೆಯೆ?" ಎಂದು ಕೇಳಿದನು.

"ಅದೇನೂ ತಪ್ಪಾಗದು. ಅದಕ್ಕೆ ಅಂಥ ಬುದ್ಧಿಯಿಲ್ಲ" ಎಂದ ನ್ಯಾಯಾಧಿಕಾರಿ.

"ಹಾಗಾದರೆ ಹೋಗಿ ಬರುತ್ತೇನೆ ಜಮೀನ್ದಾರ್ರೇ" ಎಂದು ಯಾಚಕನು ಜಮೀನ್ದಾರನನ್ನು ನೋಡಿ ಹೇಳಿ, ರಕ್ಷಕ ಭಟರೊಂದಿಗೆ ಕಾರಾಗೃಹಕ್ಕೆ ಹೋದನು.





# ಇಬ್ಬರು ಮೋಸಗಾತಿಯರು

**ಹಾ**ರೂನ್ ಅಲ್ ರಷೀದ್ ಬಾಗ್ದಾದಿನ ಖಲೀಫನಾಗಿದ್ದ ಕಾಲದಲ್ಲಿ ಆ ರಾಜ್ಯದೊಳಗೆಲ್ಲಾ ಪಾರಿವಾಳಗಳ ಅಂಚೆ ಪದ್ಧತಿ ಅಮಲಿನಲ್ಲಿದ್ದಿತು. ಒಬ್ಬ ದೊಡ್ಡ ಮನುಷ್ಯನು ಅದನ್ನು ನಡೆಯಿಸಿಕೊಂಡಿದ್ದನು. ಖಲೀಫನು ಅವನನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದನು. ಅವನಿಗೆ ತಿಂಗಳಿಗೆ ಒಂದು ಸಾವಿರ ದಿನಾರಗಳು ಸಂಬಳವಾಗಿದ್ದಿತು.

ಕಾಲಕ್ರಮದಲ್ಲಿ ಆ ದೊಡ್ಡ ಮನುಷ್ಯನು ತೀರಿಹೋದ ಮೇಲೆ ಪಾರಿವಾಳಗಳ ಅಂಚೆಗೂ ಅಂತ್ಯ ಬಂದಿತು. ಅವನು ಅಂಚೆಯ ಕೆಲಸಕ್ಕಾಗಿ ಇಟ್ಟುಕೊಂಡಿದ್ದ ಪಾರಿವಾಳಗಳನ್ನೂ, ಅವನ ನಲುವತ್ತು ಮಂದಿ ನೀಗ್ರೋ ಗುಲಾಮರನ್ನೂ, ನಲುವತ್ತು ಬೇಟೆನಾಯಿಗಳನ್ನೂ ಖಲೀಫನೇ ಇಟ್ಟುಕೊಂಡನು.

ಪಾರಿವಾಳಗಳ ಅಂಚೆಯ ಅಧಿಕಾರಿಯ ಹೆಂಡತಿಯ ಹೆಸರು ದಿಲ್ಲೈಲಾ. ಅವಳಿಗೆ ಒಬ್ಬಳು ಮಗಳೂ ಇದ್ದಳು. ಮಗಳ ಹೆಸರು ಜೀನಾಬ್. ಗಂಡ ತೀರಿಹೋದ ಮೇಲೆ, ಆತನ ಸ್ಥಾನದಲ್ಲಿ ತಾನೇ ಇದ್ದು ಅಂಚೆಗಳ ಟಪಾಲಿನ ಕೆಲಸಮಾಡಬಲ್ಲೆನೆಂದೂ, ತನಗೆ ಆ ಉದ್ಯೋಗವನ್ನು ಕೊಟ್ಟು, ತನ್ನ ಗಂಡನಿಗೆ ಕೊಟ್ಟ ಸಂಬಳವನ್ನೇ ತನಗೂ ಕೊಡಬೇಕೆಂದೂ ದಿಲ್ಲೈಲಾ ಖಲೀಫನಿಗೆ ಅರ್ಜೀ ಬರೆದುಕೊಂಡಳು. ಈ ಅರ್ಜೀ ಕಸದಬುಟ್ಟಿಗೆ ಸೇರಿತು. ದಿಲ್ಲೈಲಾಳ ಶಕ್ತಿ ಖಲೀಫನಿಗೆ ತಿಳಿಯದು.

ಈ ಸಂಗತಿ ನಡೆದ ಕೆಲವು ದಿನಗಳ ಮೇಲೆ ಖಲೀಫನು ಇಬ್ಬರು ಚೋರಾಗ್ರೇಸರರನ್ನು ಕೋತ್ವಾಲನ ಪದವಿಗೆ ನಿಯಮಿಸಿಬಿಟ್ಟನು. ಆ ಕಳ್ಳರಲ್ಲಿ ಒಬ್ಬನ ಹೆಸರು ಅಹ್ಮದ್. ಎರಡನೆಯವನ ಹೆಸರು ಹಸನ್. ಅವರಿಬ್ಬರ ಕಳ್ಳತನದ ಸಾಮರ್ಥ್ಯ ಬಹು ದೊಡ್ಡದು. ಅವರನ್ನು ಹಿಡಿಯಲು ಖಲೀಫನು ಎಷ್ಟು ಪ್ರಯತ್ನ ಮಾಡಿದರೂ ವ್ಯರ್ಥವಾಗಿದ್ದುವು. ಅಷ್ಟೊಂದು ಬುದ್ಧಿವಂತಿಕೆಯುಳ್ಳ ಕಳ್ಳರನ್ನು ಕೊತ್ವಾಲ ಪದವಿಗೆ ನಿಯಮಿಸಿಬಿಟ್ಟರೆ ಒಳ್ಳೆಯದೆಂದು ಖಲೀಫನಿಗೆ ತೋರಿತ್ತು. ಈ ಸಂಗತಿಯನ್ನು ಪ್ರಕಟಿಸಿ ಅವರನ್ನು ಬರಮಾಡಿ, ಕೋತ್ವಾಲ ಪದವಿಗಳನ್ನು ಕೊಟ್ಟಿದ್ದನು.

ತನ್ನ ಅರ್ಜಿಯನ್ನು ತಿರಸ್ಕಾರಮಾಡಿ, ಯಾರೋ ಇಬ್ಬರು ಕಳ್ಳರಿಗೆ ಉನ್ನತ ಪದವಿಗಳನ್ನು ಕೊಟ್ಟ ಖಲೀಫನ ಮೇಲೆ ದಿಲ್ಲೈಲಾ ಕೆಂಡವಾದಳು. " ಈ

ದೇಶದಲ್ಲಿ ಕಳ್ಳರಿಗೂ ಮೋಸಗಾರರಿಗೂ ಇಷ್ಟೊಂದು ಗೌರವವಿರುವುದಾದರೆ, ನಾವು ಮಾತ್ರ ಕಡಿಮೆಯವರೆಂದುಕೊಂಡರೋ? ನೋಡಿದೆಯಾ ಜೀನಾಬ್! ಈ ಅಹ್ಮದ್ ಹಸನ್ನರು ನನ್ನ ಮುಂದೆ ಯಾವುದಕ್ಕೂ ಉಪಯೋಗವಿಲ್ಲದವರೆಂದು ನಿರೂಪಿಸಿಬಿಡುತ್ತೇನೆ!" ಎಂದಳು ಮಗಳೊಂದಿಗೆ.

ನಿಜಕ್ಕೂ ದಿಲ್ಲೈಲಾ ವಯಸ್ಸಿನಲ್ಲಿ ವೃದ್ಧಳಾದರೂ ಯುಕ್ತಿಯಲ್ಲಿ ಮಹಾ ನಿಪುಣೆ. ಅವಳ ಮಗಳು ಜೀನಾಬ್ ಕೂಡಾ ತಾಯಿಗೆ ಒಂದಿಷ್ಟೂ ಕಡಿಮೆಯವಳಲ್ಲ. ತಾಯಿಯ ಪ್ರತಿಜ್ಞೆ ಮಗಳನ್ನು ಮೆಚ್ಚಿಸಿತು.

ತನ್ನ ಮೋಸಗಳಿಂದ ಇಡಿಯ ಬಾಗ್ದಾದನ್ನೇ ಮಾರ್ಮೊಳಗಿಸಿ ಬಿಡಬೇಕೆಂದು ದಿಲ್ಲೈಲಾ ಹಟಗಟ್ಟಿದ್ದಳು. ಅದಕ್ಕಾಗಿ ಅವಳು ಸೂಫೀ ಸನ್ಯಾಸಿನಿಯ ಹಾಗೆ ವೇಷ ಧರಿಸಿಕೊಂಡಳು. ಕೊರಳಲ್ಲಿ ತುಂಬಾ ಮಣಿಸರಗಳನ್ನು ಹಾಕಿಕೊಂಡಳು. ಕೈಯಲ್ಲಿ ಸೂಫೀ ಸನ್ಯಾಸಿಗಳು ಹಿಡಿದುಕೊಳ್ಳುವ ಪತಾಕೆಯನ್ನು ಹಿಡಿದುಕೊಂಡು ತನ್ನ ಮನೆಯಿಂದ ಹೊರಟಳು ವೃದ್ಧೆ ದಿಲ್ಲೈಲಾ.

ಬಾಗ್ದಾದಿನಲ್ಲಿರುವ ದೊಡ್ಡ ಮನುಷ್ಯರ ಸಾಲಿನಲ್ಲಿ ರಕ್ಷಕಭಟರ ಮುಖಂಡನಾದ ಮುಸ್ತಫಾ ಎಂಬವನೊಬ್ಬನು. ಅವನಿಗೆ ಭಾರಿ ಸಂಬಳವಿತ್ತು. ಬ್ರಹ್ಮಾಂಡದಂತಹ ಅವನ ಸುಂದರವಾದ ಮನೆಗೆ ಗಂಧದ ಹಲಗೆಗಳಿಂದಾದ ಬಾಗಿಲುಗಳೂ, ಬೆಳ್ಳಿಯ ಬೀಗಗಳೂ ಇದ್ದುವು. ಇಷ್ಟೊಂದು ಐಶ್ವರ್ಯದಲ್ಲಿ ತೇಲಾಡುವ ಮುಸ್ತಫಾನ ಹೆಂಡತಿ ಚಿಕ್ಕವಯಸ್ಸಿನ ಖಾತೂನ್ ಎಂಬವಳು ಬಲು ಚೆಲುವೆ. ಹೆಂಡತಿಯ ಮೇಲೆ ಮುಸ್ತಫಾ ಜೀವವನ್ನಿಟ್ಟಿದ್ದನು. ಆದ್ದರಿಂದಲೇ ಅವಳು ಸಂತಾನವತಿಯಾಗದಿದ್ದರೂ, ಇನ್ನೊಬ್ಬಳನ್ನು ಮದುವೆಯಾಗದಿದ್ದನು. ಅವನ ಸಹೋದ್ಯೋಗಿಗಳೂ, ಜೊತೆಯ ಅಧಿಕಾರಿಗಳೂ ಖಲೀಫರ



ದಿವಾನಕ್ಕೆ ತಮ್ಮ ಪುತ್ರರೊಂದಿಗೆ ಬಂದಾಗ ಮುಸ್ತಫಾ ಒಳಗೊಳಗೇ ಕುದಿಯುವನು.

ಖಾತೂನ್ ಕೂಡಾ ತನಗೆ ಮಕ್ಕಳಾಗಲಿಲ್ಲವೆಂದು ತುಂಬಾ ಚಿಂತಿಸುತ್ತಿದ್ದಳು. ತನ್ನ ಗಂಡ ಮಕ್ಕಳಿಗಾಗಿ ಬೇಯುತ್ತಿರುವ ಸಂಗತಿ ಅವಳಿಗೆ ಗೊತ್ತು. ಮಕ್ಕಳಾಗಬೇಕೆಂದು ಅವಳು ಎಷ್ಟೋ ಉಪಕ್ರಿಯೆಗಳನ್ನು ಮಾಡಿಕೊಂಡಿದ್ದಳು. ಔಷಧ ಸೇವಿಸಿದ್ದಳು. ಮಸೀದಿಗಳಿಗೆ ಸೇವೆ ಸಲಿಸಿದ್ದಳು. ಎಲ್ಲವೂ ನಿರರ್ಥಕವಾಗಿತ್ತು.

ಸೂಫೀ ಸನ್ಯಾಸಿನಿಯ ವೇಷದಲ್ಲಿ ದಿಲ್ಲೈಲಾ, "ಅಲ್ಲಾ! ಅಲ್ಲಾ!" ಎಂದು ಕೂಗುತ್ತಾ ಬೀದಿಯಲ್ಲಿ ಮುಸ್ತಫಾನ ಮನೆಯ ಹತ್ತಿರ ಬಂದಳು. ಅವಳು ತಲೆಯೆತ್ತಿ ನೋಡಿದಾಗ, ಉಪ್ಪರಿಗೆಯ ಕಿಟಿಕಿಯಲ್ಲಿ ಖಾತೂನ್ ತನ್ನನ್ನೇ ನೋಡುವುದನ್ನು ಗಮನಿಸಿದಳು. ಮೈತುಂಬಾ ಆಭರಣಗಳನ್ನು ಧರಿಸಿ ಹೊಸ ಮದುಮಗಳ ಹಾಗೆ ಖಾತೂನ್ ಹೊಳೆಯು



ತ್ತಿದ್ದಳು. "ಈ ಹುಡುಗಿಯನ್ನು ತೆಗೆದುಕೊಂಡು ಹೋಗಿ ಇವಳ ನಗಗಳನ್ನೆಲ್ಲಾ ಅಪಹರಿಸದಿದ್ದರೆ, ನನ್ನ ಪ್ರಜ್ಞೆಗೆ ಬೆಲೆಯೇ ಇಲ್ಲ! ಕಸಕ್ಕೆ ಸಮ!" ಎಂದುಕೊಂಡಳು ದಿಲ್ಲೈಲಾ.

ಸೂಫೀ ಸನ್ಯಾಸಿಯಂತಿರುವ ದಿಲ್ಲೈಲಾಳನ್ನು ನೋಡಿದ ಕೂಡಲೇ ಖಾತೂನಳಿಗೆ ಕೂಡಾ ಆಶೆ ಮೇಲೆದ್ದಿತು. ಈ ಸೂಫೀ ಸನ್ಯಾಸಿನಿಯ ಅನುಗ್ರಹವನ್ನು ಸಂಪಾದಿಸಿದರೆ ತನಗೇನಾದರೂ ಸಂತಾನವಾಗಬಹುದೆಂದು ಅವಳಿಗೆ ತೋರಿತು. ಅಂತೆಯೇ ಖಾತೂನ್ ದಿಲ್ಲೈಲಾಳನ್ನು ಕರೆದುಕೊಂಡು ಬರಲು ತನ್ನ ದಾಸಿಯನ್ನು ಕಳುಹಿಸಿಕೊಟ್ಟಳು.

ದಿಲ್ಲೈಲಾ ಬಂದ ಕೂಡಲೇ ಖಾತೂನ್ ಅವಳ ಪಾದಗಳ ಮೇಲೆ ಬಿದ್ದು, ತನ್ನ ಮನಸ್ಸಿನಲ್ಲಿದ್ದ ಮಹಾ ಚಿಂತೆಯನ್ನು ಅವಳೊಡನೆ ಹೇಳಿಕೊಂಡಳು. ಅದನ್ನೆಲ್ಲಾ ಕೇಳಿ ದಿಲ್ಲೈಲಾ, "ಇದೇನೂ ಅಂಥ ದೊಡ್ಡ ಸಮಸ್ಯೆ ಅಂದುಕೊಂಡೆಯಾ? ಈ ನಗರದಲ್ಲೇ ಸಂತಾನಸಾಧು ಎಂಬವನಿದ್ದಾನೆ. ಅವನನ್ನು ನೀನು ಒಂದುಸಾರಿ ನೋಡಿ ಆಶೀರ್ವಾದ ಪಡೆದರೇ ಸಾಕು. ನಿನ್ನ ಅಭೀಷ್ಟ ಸಿದ್ಧಿಸುವ ಮಾರ್ಗ ಅವನು ತೋರಿಸುತ್ತಾನೆ." ಎಂದಳು.

ಅದನ್ನು ಕೇಳಿ ಖಾತೂನ್ ವಿಚಾರ ವ್ಯಕ್ತಪಡಿಸುತ್ತ, "ನಾನು ಈವರೆಗೂ ಯಾವ ಪುಣ್ಯಕ್ಕೂ ಮನೆಬಿಟ್ಟು ಹೊರಗೆ ಹೋದವಳಲ್ಲ. ಒಬ್ಬಳೇ ಹೇಗೆ ಹೋಗಲಿ?" ಎಂದಳು.

"ಹಾಗಾದರೆ ಈಗಲೇ ನನ್ನ ಜತೆಯಲ್ಲಿ ಬಂದುಬಿಡು. ನಿನ್ನನ್ನು ಆ ಸಾಧುವಿನ ಬಳಿಗೆ ಕರೆದುಕೊಂಡು ಹೋಗುತ್ತೇನೆ. ನಿನ್ನ ಗಂಡ ಮನೆಗೆ ಬರುವುದರೊಳಗೆ ನೀನು ಮನೆಗೆ ಹಿಂದಿರುಗಿ ಬಂದುಬಿಡಬಹುದು. ನಿನ್ನಂಥವಳಿಗೆ ಉಪಕಾರ ಮಾಡುವುದೇ ನನ್ನ ಧರ್ಮ" ಎಂದಳು.

ತನ್ನ ಬಯಕೆ ಈಡೇರುವುದೆಂಬ ಆನಂದದಲ್ಲಿ ಖಾತೂನ್ ತನ್ನ ಉಳಿದ ಆಭರಣಗಳನ್ನು ಕೂಡಾ ಧರಿಸಿಕೊಂಡು ದಿಲ್ಲೈಲಾಳೊಂದಿಗೆ ಹೊರಟುಬಿಟ್ಟಳು. ಅವರಿಬ್ಬರೂ ಸ್ವಲ್ಪದೂರ ಹೋದಾಗ ಸಿದ್ದೀಮೊಹಸಿನ್ ಎಂಬವನ ಅಂಗಡಿಯೊಂದು ಬಂದಿತು. ಈ ಅಂಗಡಿಯ ಒಡೆಯನು ಯುವಕನಾಗಿದ್ದನು. ಅವನಿಗೆ ಇನ್ನೂ ಮದುವೆಯಾಗಿರಲಿಲ್ಲ. ಅಂಗಡಿಯ ಮುಖದ್ವಾರದಲ್ಲೇ ನಿಂತಿರುವ ಆತನನ್ನು ನೋಡಿದ ಕೂಡಲೇ ದಿಲ್ಲೈಲಾಳಿಗೆ ಒಂದು ಆಲೋಚನೆ ಹೊಳೆಯಿತು. ಅವಳು ಖಾತೂನಳನ್ನು ಹೊರಗಿನ ಜಗಲಿಯಲ್ಲಿ ಕುಳ್ಳಿರಿಸಿ, ಮೊಹಸಿನನ ಅಂಗಡಿ ಹೋಗಿ, ಮೊಹಸಿನನೊಂದಿಗೆ, "ಅಕೋ ಅಲ್ಲಿ ಕುಳಿತಿರುವವಳು ನನ್ನ ಮಗಳು. ತುಂಬಾ ಚೆಲುವೆ. ನಿನ್ನಂತಹ ಬುದ್ಧಿವಂತನೊಬ್ಬನನ್ನು ನೋಡಿ ಮದುವೆ ಮಾಡಿಬಿಟ್ಟೆನೆಂದರೆ ನನ್ನ ಕರ್ತವ್ಯ ಮುಗಿಯಿತು. ಅವಳ ತಂದೆ ವ್ಯಾಪಾರದಲ್ಲಿ ಅಪಾರ ಹಣ ಸಂಪಾದಿಸಿಟ್ಟಿದ್ದಾರೆ. ನೀನು ಕೇಳುವ ಶುಲ್ಕ




ಕೊಡುತ್ತಾರೆ. ಇಂತಹ ಇನ್ನೆರಡು ಅಂಗಡಿ ಇಟ್ಟು ಕೊಳ್ಳಬಹುದು ನೀನು" ಎಂದಳು.

ಮೊಹಸಿನನಿಗಾದ ಸಂತೋಷವನ್ನು ಹೇಳಿ ತೀರದು. "ಮದುವೆ ಯಾವಾಗ ಖರಾರು ಪಡಿಸೋಣ ?" ಎಂದು ಕೇಳಿದನು ಅತ್ಯಾತುರದಿಂದ.

"ನನ್ನೊಂದಿಗೆ ಬಂದರೆ ಈಗಲೇ ಖರಾರು ಮಾಡಿಕೊಳ್ಳಬಹುದು" ಎಂದಳು ದಿಲೈಲಾ. ಮೊಹಸಿನ್ ಒಂದು ಸಾವಿರ ದೀನಾರಗಳ ಚೀಲದ ಗಂಟನ್ನು ಕಂಕುಳಲ್ಲಿಟ್ಟುಕೊಂಡು ಹೊರಟನು.

ದಿಲೈಲಾ ಖಾತೂನಳನ್ನು ಹೊರಡಿಸಿ, ಮೊಹಸಿನ ನೊಂದಿಗೆ ಹೋಗುತ್ತಿರುವಾಗ, ಹಾಜ್ ಮುಹಮ್ಮದ್ ಎಂಬ ರಂಗಾರಿಯ ಅಂಗಡಿ ಬಂದಿತು. ದಿಲೈಲಾ ತನ್ನೊಂದಿಗಿದ್ದ ಇಬ್ಬರನ್ನೂ ತುಸು ದೂರದಲ್ಲಿ ಮಾತಾಡದೆ ನಿಲ್ಲುವಂತೆ ಹೇಳಿ. ದಿಲೈಲಾ ಅಂಗಡಿಯೊಳಗೆ ಹೋದಳು.

"ಅಯ್ಯಾ, ಅಲ್ಲಿ ನಿಂತಿರುವರಿಬ್ಬರೂ ನನ್ನ ಮಗ ಮತ್ತು ಮಗಳು. ಹಳೆಯದಾದ ನಮ್ಮ ಮನೆ ಮಗುಚಿ ಬೀಳುವ ಸ್ಥಿತಿಗೆ ಬಂದುದರಿಂದ ದುರಸ್ತಿ ಪ್ರಾರಂಭಿಸಿದ್ದೇವೆ. ನಿಮಗೆ ತಿಳಿದಂತೆ ಇಲ್ಲೆಲ್ಲಾದರೂ ಖಾಲೀ ಮನೆಯಿದೆಯೋ? ನಾಲ್ಕುದಿನಗಳವರೆಗೆವಾಸ ಮಾಡಲು ಸಿಕ್ಕಿದರೆ ಸಾಕು." ಎಂದು ದಿಲೈಲಾ ರಂಗಾರಿ ಹಾಜ್ ಮುಹಮ್ಮದನೊಂದಿಗೆ ವಿಚಾರಿಸಿದಳು.

ಅವನು ಆಲೋಚನೆ ಮಾಡಿ, "ನನ್ನ ಮನೆಯ ಮೇಲಿನ ಭಾಗವು ಖಾಲೀಯಾಗಿಯೇ ಇದೆ. ಕೆಳಗೆ ನಾನಿರುತ್ತೇನೆ. ಈ ಪ್ರಾಂತಕ್ಕೆ ನೀಲಿರಂಗು ಮಾರಲು ಬರುವವರು ತಂಗಲಿಕ್ಕಾಗಿ ಉಪ್ಪರಿಗೆಯ ಭಾಗವನ್ನು ಖಾಲಿಯಾಗಿರಿಸಿದ್ದೇನೆ. ನಾಲ್ಕು ದಿನಗಳ ವರೆಗೆ ನೀವು ಉಪಯೋಗಿಸಿಕೊಳ್ಳಲು ಅಡ್ಡಿಯಿಲ್ಲ. ಇಗೊಳ್ಳಿ ಬೀಗದ ಕೈ" ಎಂದನು.

ದಿಲೈಲಾ ಖಾತೂನಳನ್ನೂ ಮೊಹಸಿನನನ್ನೂ ಕರೆದುಕೊಂಡು ಹಾಜ್ ಮುಹಮದನ ಮನೆಯ ಬೀದಿಗೆ ಹೋಗಿ, ಆ ಮನೆಯ ಕೆಳಭಾಗವನ್ನು ತೆರೆದು ಒಳಗೆ ಹೋಗುವಂತೆ ಮೊಹಸಿನನಿಗೆ ಸನ್ನೆ ಮಾಡಿದಳು. ಆಮೇಲೆ ಅವಳು ಖಾತೂನಳ ಜತೆಯಲ್ಲಿ ಉಪ್ಪರಿಗೆಗೆ ಹೋಗಿ, ಅವಳೊಂದಿಗೆ, "ಹುಡುಗೀ, ನಾನು ಹೇಳಿದ ಸಾಧು ಈ ಮನೆಯ ಕೆಳಭಾಗದಲ್ಲೇ ಇದ್ದಾನೆ. ನಾನು ಹೋಗಿ ಅವನೊಂದಿಗೆ ನಿನ್ನ ವಿಷಯವನ್ನು ಹೇಳಿ ಈಗಲೇ ಬರುತ್ತೇನೆ. ನೀನು ನಿನ್ನ ನಗಗಳನ್ನೆಲ್ಲಾ ತೆಗೆದು ಗಂಟುಕಟ್ಟಿಡು, ಆತನನ್ನು ನಿರಾಡಂಬರಳಾಗಿ ನೋಡ ಬೇಕಮ್ಮ. ನಗ ನಾಣ್ಯಗಳ ಹೊಳಪು ಕಂಡರೆ ಅವನಿಗಾಗದು" ಎಂದು ಹೇಳಿ ಕೆಳಗೆ ಹೋದಳು.

ಮೊಹಸಿನ್ ಅವಳನ್ನು ನೋಡಿ, "ಕರಾರಿಗೆ ಇನ್ನು ಯಾರೆಲ್ಲ ಬರಬೇಕು ?" ಎಂದು ಕೇಳಿದನು.

ದಿಲೈಲಾ ಅಳುಮೋರೆ ಮಾಡಿಕೊಂಡು, "ಮೊದಲು ಹುಡುಗಿ ನಿನ್ನ ನೋಡಿ ಒಪ್ಪಿಕೊಳ್ಳ ಬೇಕಲ್ಲಪ್ಪಾ! ನಿನ್ನನ್ನು ಅವಳು ಯಾರಿಂದಲೋ

ಅರಿತಿದ್ದಾಳಂತೆ. ಯಾರೋ ಹೊಟ್ಟೆ ಕಿಚ್ಚಿನವರು ಅವಳ ಮನಸ್ಸನ್ನು ಕೆಡಿಸಿಬಿಟ್ಟಿದ್ದಾರೆ. ನಿನ್ನ ಶರೀರ ದಲ್ಲಿ ಹುಳುಕಜ್ಜಿಯಿದೆಯಂತೆ; ಬಿಳಿತೊನ್ನು ಇದೆಯಂತೆ. ಚಾಡೀಗಾರರಿಗೇನು, ಬಾಯಿಗೆ ಬಂದ ಹಾಗೆ ಹೇಳಿಬಿಟ್ಟಿದ್ದಾರೆ. ನೀನು ಬೇಡವೇ ಬೇಡ ವೆನ್ನುತ್ತಾಳೆ. ಒಂದು ಮಾಡು. ಅಂಗಿ ತೆಗೆದು ಕುಳಿತಿರು. ಅವಳಿಗೆ ನಿನ್ನನ್ನು ತೋರಿಸಿ ಒಪ್ಪಿಸಿ ಬಿಡು ತ್ತೇನೆ. ನಿನ್ನ ಚೀಲವನ್ನೂ, ಅಂಗಿಯನ್ನೂ ನನ್ನ ಕೈಗೆ ಕೊಡು. ಮೇಲೆ ಭದ್ರವಾಗಿಟ್ಟಿರುತ್ತೇನೆ" ಎಂದಳು.

ಮೊಹಸಿನ್ ದೀನಾರಗಳ ಚೀಲವನ್ನೂ, ಅಂಗಿ ಯನ್ನೂ ಅವಳ ಕೈಗೆ ಕೊಟ್ಟನು. ಅವಳು ಮತ್ತೆ ಮೇಲೆ ಹೋಗಿ ಖಾತೂನಳೊಂದಿಗೆ, "ನಿನಗಾಗಿ ಸಾಧು ಇದಿರು ನೋಡಿಕೊಂಡಿದ್ದಾನೆ. ನಿನ್ನ ಬಯಕೆ ಈಡೇರಿದ ಹಾಗೆಯೇ ತಿಳಿ, ನಡೆ, ಹೋಗೋಣ, ನಗಗಳ ಮೂಟೆ ಹೀಗೆ ಕೊಡು. ಹಿಂದೆಯೇ ಬರುತ್ತೇನೆ. ನೀನು ಕೆಳಗಿಳಿದು ಕೋಣೆಯೊಳಗೆ ಹೋಗು" ಎಂದಳು.

ಖಾತೂನ್ ಕೆಳಗಿಳಿದು ಒಳಗೆ ಹೋದಳು. ದಿಲೈಲಾ ಅವಳ ಹಿಂದೆಯೇ ಎರಡು ಮೂಟೆ ಗಳನ್ನೂ ಹಿಡಿದುಕೊಂಡು ಕೆಳಗಿಳಿದು, ನೇರಾಗಿ ಬೀದಿಗಿಳಿದು ಬಹು ವೇಗವಾಗಿ ಹೋಗಿಬಿಟ್ಟಳು.

ಖಾತೂನ್ ಕೆಳಗಿನ ಕೋಣೆಯೊಳಗೆ ಹೋಗಿ ನೋಡಿದಳು. ಅವಳಿಗೆ ಅಲ್ಲಿ ಎಲ್ಲಿಯೂ ಸಾಧು ಕಾಣ ಲಿಲ್ಲ. ಆದರೆ ಅಂಗಿಯಿಲ್ಲದೆ ಬರಿ ಮೈಯಲ್ಲಿ ಕುಳಿತಿದ್ದ ಮೊಹಿಸಿನನನ್ನು ನೋಡಿದಳು. "ನೋಡಿಕೋ! ನನ್ನ ಶರೀರದಲ್ಲಿ ಮೆಚ್ಚೆಗಿಚ್ಚೆ ಏನಾದರೂ ಇದೆಯೇ ಅಂತ ಚೆನ್ನಾಗಿ ನೋಡಿಬಿಡು, ಸಂದೇಹವಿರಬಾರದು!" ಎಂದನು ಅವಳನ್ನು ನೋಡಿದ ಕೂಡಲೇ ಮೊಹಿಸಿನ್.

ಖಾತೂನ್ ಹೆದರಿಬಿದ್ದು, ಸರಕ್ಕನೆ ತಿರುಗಿ ಉಪ್ಪರಿಗೆಯ ಮೇಲೆ ಓಡುತ್ತಾ ಹೋಗಿ, ಬಾಗಿಲು ಹಾಕಿ ಒಳಗೆ ಚಿಲುಕ ಸೇರಿಸಿದಳು. ಅಲ್ಲೆಲ್ಲಿಯೂ ಅವಳಿಗೆ ಸೂಫೀ ಸನ್ಯಾಸಿನಿಯಾಗಲೀ, ತನ್ನ ನಗ ಗಳ ಮೂಟೆಯಾಗಲೀ ಕಾಣಲಿಲ್ಲ.

ದಿಲೈಲಾ ತಾನು ವಶಪಡಿಸಿಕೊಂಡ ಮೂಟೆಗಳನ್ನು ತನಗೆ ಪರಿಚಯದವಿದ್ದ ಒಂದು ಅಂಗಡಿಯಲ್ಲಿಟ್ಟು, ರಂಗಾರಿಯ ಅಂಗಡಿಗೆ ಹೋದಳು.

"ಅಯ್ಯಾ, ನೀವು ಕೊಡಿಸಿದ ಮನೆ ನಮಗೆ ಚೆನ್ನಾಗಿ ಹಿಡಿಸಿದೆ. ಸೌಖ್ಯವಾಗಿದೆ. ನೀವು ತುಂಬಾ ಪುಣ್ಯ ಕಟ್ಟಿಕೊಂಡಿರಿ. ಮಕ್ಕಳಿಬ್ಬರೂ ಬಹಳ ಹಸಿವೆ ಅನ್ನುತ್ತಿದ್ದಾವೆ. ನೀವು ಅವರಿಗೆ ಸ್ವಲ್ಪ ತಿನ್ನಲು ಏನಾದರೂ ಒಯ್ದುಕೊಡುವಿರಾ? ಒಂದು ದೀನಾರ ಇಟ್ಟುಕೊಳ್ಳಿ. ನೀವು ಕೂಡಾ ಅವರೊಂದಿಗೆ ಜತೆಗಿದ್ದು ಫಲಾರ ಮಾಡಿರಿ. ನಾನು ಮನೆಗೆ ಹೋಗಿ ಸಾಮಾನು ಎಲ್ಲಾ ಸಾಗಿಸಿಕೊಂಡು ಬರುತ್ತೇನೆ" ಎಂದಳು ದಿಲೈಲಾ. (ಇನ್ನೂ ಇದೆ)






ಸತ್ಯಲೋಕದಲ್ಲಿರುವ ಸುಪ್ರಶಾಂತವಾದ ದಿವ್ಯ ಧಾಮದ ಸುಂದರವೂ ಭವ್ಯವೂ ಆದ ಕಮಲಾಸನದ ಮೇಲೆ ಕುಳಿತು ಹಗಲಿಡೀ ಸೃಷ್ಟಿ ಕಾರ್ಯವನ್ನು ಮಾಡಿ ಮಾಡಿ ಬ್ರಹ್ಮದೇವನು ತುಂಬಾ ಬಳಲಿದನು. ಕಲ್ಪಾಂತವು ಸಮೀಪಿಸಿ ಸಂಜೆಯಾಗಿ ಕತ್ತಲೆ ತಲೆಹಾಕುವಾಗ ಅವನನ್ನು ನಿದ್ರೆಮತ್ತಿನ ತೂಕಡಿಕೆ ಆಕ್ರಮಿಸಿತು. ಆ ತೂಕಡಿಕೆಯಿಂದ ಅವನು ಆಗಾಗ ಆಕಳಿಸುತ್ತಿರಲು, ಆ ಗಾಳಿಯಿಂದ ಪರ್ವತ ಶಿಖರಗಳು ಸುರುಟಿ ಚಿರುಟಿ ಅಗ್ನಿಕಣಗಳು ಹೊರಗೆ ಹಾರುತ್ತಿದ್ದುವು. ಅವನಿಗೆ ಪೂರ್ತಿ ನಿದ್ದೆ ಬಂದು ಕಣ್ಣುಮುಚ್ಚಿಕೊಂಡಾಗ ಆಕಾಶದಲ್ಲಿ ಗುಂಪು ಗುಂಪಾಗಿ ಸೇರಿಕೊಂಡಿದ್ದ ಪ್ರಳಯ ಮೇಘಗಳು ಸುತ್ತೂ ಹರಡಿ ಆನೆಗಳ ಸೊಂಡಿಲು ಗಾತ್ರದ ವರ್ಷಧಾರೆಗಳನ್ನು ಸುರಿಸಿ ಲೋಕವನ್ನೆಲ್ಲಾ ಪೂರ್ತಿ ಜಲಮಯ ಮಾಡಿದುವು. ಬ್ರಹ್ಮನಿಗೆ ಗಾಢನಿದ್ರೆ.

ಬ್ರಹ್ಮನಿಗೆ ನಿದ್ರೆಬರುವ ರಾತ್ರಿಯ ಕಾಲವು ಲೋಕಗಳಿಗೆಲ್ಲಾ ಪ್ರಳಯಕಾಲವಾಯಿತು. ಅನಂತರ ನೂತನ ಕಲ್ಪಾರಂಭದ ಸಮಯವು ಸಮೀಪಿಸತೊಡಗಿತು. ಮತ್ತೆ ಹೊಸ ಜಗತ್ತು ಹುಟ್ಟಲಿದ್ದು, ಬೆಳಕು ಪಸರಿಸಲಿರುವ ಸಮಯದಲ್ಲಿ ಸರಸ್ವತೀದೇವಿ ವೀಣೆಯನ್ನೆತ್ತಿಕೊಂಡು ಸ್ವರಾಲಾಪನೆ ಮಾಡುತ್ತ, ಎಲ್ಲೆಲ್ಲಿಯೂ ಭೂಪಾಳರಾಗವನ್ನು ಹರಡಿಸಿಕೊಂಡಿರಲು, ಬ್ರಹ್ಮದೇವನು ಎಚ್ಚರಕ್ಕೆ ಬಂದು ಸರಸ್ವತಿಯನ್ನು ನೋಡಿ ತಲೆದೂಗಿದನು. ತನ್ನ ನಾಲ್ಕು ಮುಖಗಳಿಂದಲೂ ನಾಲ್ಕು ದಿಕ್ಕುಗಳನ್ನೂ ಪರೀಕ್ಷಿಸಿ ನೋಡಿದನು.

ಕೆಳಭಾಗದಲ್ಲಿ ಜಗತ್ತು ಪೂರಾ ನೀರಿನ ಮಯವಾಗಿ, ಆ ನೀರಿನ ಮೇಲೆ ದೊಡ್ಡ ದೊಡ್ಡ ಪರ್ವತಗಳಂತಹ ತೆರೆಗಳು ಅಲ್ಲಕಲ್ಲೋಲಗೊಂಡಿದ್ದುವು. ಆ ಮಹಾ ಮಹಾ ತರಂಗಗಳ ನಡುವೆ ಒಂದು ಕಡೆಯಲ್ಲಿ ಬೆಳ್ಳಗಿನ ಕಾಂತಿರೇಖೆ ಲಾಸ್ಯವಾಡುವುದನ್ನು ಬ್ರಹ್ಮನು ನೋಡಿದನು. ಆ ಕಾಂತಿಯ ನಡುವೆ ತರಂಗಗಳ ಮೇಲೆ ತೇಲುತ್ತಾ ದೊಡ್ಡದೊಂದು ಅರಳಿಯೆಲೆಯಿರುವುದು ಕಂಡಿತು.

೧. ವಟಪತ್ರ ಬಾಲ ಗಣಪತಿ



ನೋಡ ನೋಡುತ್ತಿರಲು ಆದರ ಮೇಲೆ ಚಂದ್ರಬಿಂಬದಂತಹ ಬಾಲಕನು ಮಲಗಿಕೊಂಡು, ಬಲಗಾಲಿನ ಹೆಬ್ಬೆರಳನ್ನು ಬಾಯೊಳಗಿಟ್ಟು ಚಪ್ಪರಿಸುತ್ತಿರುವುದನ್ನು ನೋಡಿದನು.

ಬ್ರಹ್ಮನು ಕೈಜೋಡಿಸಿ ಕಣ್ಣುಮುಚ್ಚಿ ಆ ಪರ ಬ್ರಹ್ಮನ ಬಾಲರೂಪವನ್ನು ಧ್ಯಾನಿಸಿ ಕಣ್ಣು ತೆರೆದನು. ಆಗ ಕಂಡ ದೃಶ್ಯ ವಿಚಿತ್ರವಾಗಿತ್ತು.

ಮೊದಲು ನೋಡಿದ ಬಾಲರೂಪನು ವಿಶ್ವ ವಿರಾಟ್ ಸ್ವರೂಪನಾದ ಪರಬ್ರಹ್ಮನೇ ಎಂದು ಬ್ರಹ್ಮನಿಗೆ ಅನುಭವಪೂರ್ವಕವಾಗಿ ಗೊತ್ತಿರುವ ಸಂಗತಿ. ಆದರೆ ಈಗ ಆ ಹುಡುಗನ ತಲೆ ಆನೆಯ ತಲೆಯನ್ನು ಹೋಲುತ್ತ, ಪುಟ್ಟ ಸೊಂಡಿಲಿನಿಂದ ಬಲದ ಪಾದವನ್ನು ಹಿಡಿದು ಬಾಯೊಳಗೆ ಇಟ್ಟುಕೊಳ್ಳುವಂತೆ ಕಾಣುತ್ತಿತ್ತು.

ಆ ಮುಖವು ಪ್ರಸನ್ನವಾಗಿತ್ತು. ಬಾಲಕನು ಚಂದ್ರಬಿಂಬದಂತೆಯೇ ಹೊಳೆಯುತ್ತಿದ್ದನು. ಆತನಿಗೆ ನಾಲ್ಕು ಕೈಗಳಿದ್ದುವು. ಇದೇನು ವಿಚಿತ್ರವೆಂದು ಬ್ರಹ್ಮನು ಆಶ್ಚರ್ಯಪಡುತ್ತಿದ್ದಂತೆಯೇ ವಟಪತ್ರ ಶಾಯಿಯಾದ ಆ ಗಜಮುಖದ ಬಾಲಕನು ಅದೃಶ್ಯನಾಗಿ, ಆ ಪ್ರದೇಶದಲ್ಲಿ ಎತ್ತರವಾಗಿ ಎದ್ದ ಮಣ್ಣಿನ ರಾಶಿ ಕಂಡುಬಂತು.

ಬ್ರಹ್ಮನು ತಾನು ಕಂಡ ವಿಚಿತ್ರ ಬಾಲಕನ ರೂಪವು ಅದೇನೋ ಭ್ರಮೆಯೆಂದುಕೊಂಡು ತನ್ನ ಸೃಷ್ಟಿಕಾರ್ಯಕ್ಕೆ ತೊಡಗಿದನು. ಕ್ರಮಕ್ರಮವಾಗಿ ನೀರಿನಿಂದ ವಿಸ್ತಾರವಾದ ಭೂಭಾಗಗಳು ಏಳುತ್ತಾ, ಉಳಿದ ನೀರು ಸಮುದ್ರ ಭಾಗಗಳಾಗಿಯೂ, ಗಡ್ಡೆಗಟ್ಟಿದ ಪರ್ವತಗಳಾಗಿಯೂ ಏರ್ಪಟ್ಟುವು. ಬ್ರಹ್ಮನು ಸಂಕಲ್ಪಿಸಿಕೊಂಡಂತೆ ಭೂಭಾಗದಲ್ಲಿ ಗುಡ್ಡಬೆಟ್ಟಗಳೆದ್ದುವು. ಅವನು ಒಂದೊಂದನ್ನೂ ಸಂಕಲ್ಪಿಸಿ ಕಮಂಡಲುವಿನ ನೀರು ತೆಗೆದು ಪ್ರೋಕ್ಷಿಸಿದಂತೆ ನದಿಗಳು ಹುಟ್ಟಿದುವು. ಸಸ್ಯಗಳೂ, ಗಿಡಮರ ಬಳ್ಳಿಗಳೂ, ಖನಿಜಗಳೂ, ಬೇರೆ ಬೇರೆ ದ್ರವ್ಯಗಳೂ ಬ್ರಹ್ಮನಿಂದ ಸಂಕಲ್ಪಿಸಲ್ಪಟ್ಟು ಹುಟ್ಟಿದುವು. ಅನಂತರ ಜೀವರಾಶಿಗಳನ್ನು ಸೃಷ್ಟಿಸಲು ತೊಡಗಿದನು. ಮೊದಲು ಸಮುದ್ರದಲ್ಲಿ ನದಿಗಳಲ್ಲಿ ಮೀನು ಮೊದಲಾದ ಜಲಚರಗಳನ್ನು ಸೃಷ್ಟಿಸಿದನು. ಭೂಮಿಯ ಮೇಲೆ ಜಂತುಜಾಲಗಳನ್ನೂ, ಕ್ರಿಮಿ ಕೀಟಕಾದಿಗಳನ್ನೂ, ಖೇಚರಗಳನ್ನೂ ಸೃಷ್ಟಿ ಮಾಡಿದನು. ಅದೆಲ್ಲ ಆಗಿ ಕಳಕಳಿಸುವ ಜಗತ್ತಿನಲ್ಲಿ ಮನುಷ್ಯರನ್ನು ಸಂಕಲ್ಪಿಸಿ ಕಮಂಡಲೋದಕವನ್ನು ನಾಲ್ಕು ಸುತ್ತಲೂ ಪ್ರೋಕ್ಷಿಸಿದನು.

ಆಗ ಸರಸ್ವತೀದೇವಿ ವೀಣೆ ಬಾರಿಸಿ ಕೊಂಡೇ ಇದ್ದಳು. ಆ ವೀಣೆಯಿಂದ ಹೊರಟ ಸ್ವರಗಳೇ ಜಗತ್ತಿನ ಪ್ರಾಣಿಕೋಟಿಗಳಲ್ಲಿ ನಾನಾವಿಧ ವಾಗಿ ಧ್ವನಿಸಿಕೊಂಡಿದ್ದುವು. ಹೀಗಿರಲು ಒಂದು ಗತಿಯಲ್ಲಿ ಯಾವ ಕಾರಣದಿಂದಲೋ ಅವಳ ವೀಣೆ ಯಿಂದ ಅಪಶ್ರುತಿ ಹೊರಡತೊಡಗಿತು. ಸರಸ್ವತಿ

ಬೆರಗಾಗಿ ಅತ್ತಿತ್ತ ನೋಡಿದಳು. ಬ್ರಹ್ಮನು ತನ್ನ ಅರ್ಧಾಂಗಿಯ ತಬ್ಬಿಬ್ಬುತನವನ್ನು ನೋಡಿ ಅರ್ಥವಾಗದೆ, ಅವಳು ತೋರಿಸಿದಂತೆ ಕಮಲಾಸನದಿಂದ ಬಗ್ಗಿ ಕೆಳಗೆ ನೋಡಿ, ತಾನೂ ಗಾಬರಿಯಾಗಿ ಹೋದನು !

ಪರ್ವತಗಳು ಆಚೀಚೆ ವಾಲುತ್ತ, ಶಿಖರಗಳನ್ನು ಅಗಲಿಸಿಕೊಂಡು ಆಕಾಶದಲ್ಲಿ ಕೊಡೆಯಂತೆ ಹರಡುತ್ತ, ತಮ್ಮ ಬುಡಕ್ಕೆ ಸೂರ್ಯರಶ್ಮಿ ಬೀಳದಂತೆ ಚಲಿಸಿಕೊಂಡಿದ್ದುವು. ಇದೆಂತಹ ವಿಪರೀತ !

ಸೀದಾಹರಿದು ಸಾಗರ ಸೇರಬೇಕಾಗಿದ್ದ ನದಿಗಳು ಸಾಗರಕ್ಕಿಂತ ಎತ್ತರವಾದ ಪ್ರದೇಶಕ್ಕೆ ಏರಲು ನೋಡುತ್ತಿದ್ದುವು. ವೃಕ್ಷಗಳು ತಲೆಕೆಳಗಾಗಿ, ಬೇರುಗಳು ಆಕಾಶವನ್ನು ಒದೆಯುತ್ತಿದ್ದುವು.

ಸಮುದ್ರ ತರಂಗಗಳ ಮೇಲೆ ಜಲಚರಗಳು ತೇಲುತ್ತ ಕುಪ್ಪಳಿಸಿ ಹಾರುತ್ತಿದ್ದುವು. ಕೆಲವು ನೆಟ್ಟಗೆ ಆಕಾಶಕ್ಕೇ ಏರುತ್ತಿದ್ದುವು, ಬೀಳುತ್ತಿದ್ದುವು. ಕೆಲವು ರೆಕ್ಕೆ ಬಂದ ಪಕ್ಷಿಗಳ ಹಾಗೆ ಹಾರುತ್ತಿದ್ದವು.

ಇಷ್ಟೇ ಅಲ್ಲ, ಪ್ರಾಣಿಕೋಟಿಗಳು ಕೂಡಾ ತುಂಬಾ ಅನರ್ಥವಾಗಿದ್ದುವು. ಕೆಲವಕ್ಕೆ ತಲೆಗಳೇ ಇಲ್ಲ. ಕೆಲವು ಪ್ರಾಣಿಗಳಿಗೆ ಹಿಂದಿನ ಕಾಲುಗಳಿಲ್ಲ. ಒಂದೇ ಕಾಲಿನ ಪ್ರಾಣಿಗಳು ಕೆಲವು. ಮೂರು ಕಾಲಿನ ಪ್ರಾಣಿಗಳೂ, ಕಿವಿ, ಕಣ್ಣುಗಳೆಲ್ಲಾ ಇದ್ದು ಬಾಯಿಯೇ ಇಲ್ಲದ ಜೀವಿಗಳೂ, ತಲೆಯಲ್ಲಿ ಬಾಲವಿರುವಂಥವೂ, ಬಾಲಕ್ಕೆ ತಲೆ ಅಂಟಿಕೊಂಡ ಜಂತುಗಳೂ ಕಾಣುತ್ತಿದ್ದುವು. ಪಕ್ಷಿಗಳು ರೆಕ್ಕೆಗಳಿಲ್ಲದೆ ಕುಪ್ಪಳಿಸುತ್ತಿದ್ದುವು. ಅನೇಕ ಪಕ್ಷಿಗಳು ಹೊರಳಾಡಿಕೊಂಡಿದ್ದುವು.

ಮನುಷ್ಯರಲ್ಲಿ ಕೆಲವರಿಗೆ ಎರಡು ತಲೆಗಳಿದ್ದುವು. ಅವುಗಳಲ್ಲಿ ಒಂದು ತಲೆ ಹೆಣ್ಣಿನದು. ಎರಡನೆಯದು ಮೀಸೆ ಮೊಳೆತ ಗಂಡಿನದು. ಶರೀರವೂ ಯದ್ವಾತದ್ವಾ ಆಗಿತ್ತು.

ಹಲವು ಗಂಡು ಮನುಷ್ಯರು ಗೇಣುದ್ದ ಮೊಳದುದ್ದವಾಗಿದ್ದರು. ಸ್ತ್ರೀಯರು ದೊಡ್ಡ ಆನೆಗಳ ಹಾಗೆ, ತಾಳೇ ಮರಗಳ ಹಾಗೆ ಕಾಣುತ್ತಿದ್ದರು.





ಬೆನ್ನಿಗೆ ತಲೆಗಳನ್ನು ಅಂಟಿಸಿಕೊಂಡಂತಿರುವವರೂ, ನಾಲ್ಕು, ಮೂರು, ಒಂದು ಕಾಲುಳ್ಳವರೂ, ಹೊಟ್ಟೆಯಲ್ಲೇ ದೊಡ್ಡ ಬಾಯಿಯುಳ್ಳ ಕಬಂಧ ಗಾತ್ರರೂ ಕರ್ಕಶವಾಗಿ ಆಕ್ರಂದನ ಮಾಡಿಕೊಂಡಿದ್ದರು.

ಅನೇಕ ಬಗೆಯ ಮೃಗಗಳು ತಲೆಯೆತ್ತಿ ಗೋಳಿಡುತ್ತಿದ್ದುವು. ಮತ್ತೆ ಹಲವು ಮೂಕವಾಗಿ ಆಕಾಶವನ್ನು ನೋಡುತ್ತಿದ್ದುವು. ಸೃಷ್ಟಿಕರ್ತನಾದ ಬ್ರಹ್ಮನನ್ನು ಎಲ್ಲವೂ ನಿಂದಿಸುತ್ತಿರುವಂತೆ, ಕೋಪ ದಿಂದ ಕೈಕಾಲು ಬಡಿದುಕೊಳ್ಳುವಂತೆ ಕಾಣುತ್ತಿದ್ದುವು

ಒಬ್ಬ ಗೇಣುದ್ದದ ಗಂಡಸು, ತಾಳೇ ಮರದ ಹಾಗೆ ವಿಕೃತಾಕಾರಿಣಿಯಾದ ಸ್ತ್ರೀಯನ್ನು ತೋರಿಸುತ್ತ "ಓ! ಬ್ರಹ್ಮದೇವಾ! ಇಂತಹ ಸ್ತ್ರೀಯೊಂದಿಗೆ ನಾನು ಹೇಗೆ ಸಂಸಾರ ಸಾಗರದಲ್ಲಿ ಈಜಾಡಿಯೇನು? ನಮಗೆಲ್ಲಾ ಇಂಥಾ ದುರ್ಗತಿ ಯನ್ನು ಏಕೆ ತಂದಿಟ್ಟೆ?" ಎಂದು ಆಕಾಶಕ್ಕೆ ತಲೆ ಚಾಚಿ ಕೂಗುತ್ತಿದ್ದನು.

"ನಾಲ್ಕು ತಲೆಗಳನ್ನು ಇಟ್ಟುಕೊಂಡು, ಅಸಲು ತಲೆ ಎಂಬುದೇ ಇಲ್ಲದ ಓ ಬ್ರಹ್ಮದೇವಾ! ನಮ್ಮನ್ನೆಲ್ಲಾ ಹೀಗೆ ಹುಟ್ಟಿಸಿದೆಯಲ್ಲಾ! ಹೇಗೆ ಸಾಯಬೇಕು ನಾವು?" ಎಂದು ವಿಕೃತಾಕಾರಿಗಳಾದ ಮನುಷ್ಯರು ಮಾಡುವ ಆಕ್ರಂದನಗಳು ಬ್ರಹ್ಮನ ಕರ್ಣಗಳನ್ನು ನೋಯಿಸಿದುವು.

ಬ್ರಹ್ಮನ ನಾಲ್ಕು ತಲೆಗಳೂ ಗಿರ್‍ರನೆ ತಿರುಗಿದುವು. ಅವನ ಎಂಟು ಕಣ್ಣುಗಳಿಗೂ ಕತ್ತಲಿಟ್ಟಿತು. ಏನೂ ತೋರದೆ ಬ್ರಹ್ಮನು ಸರಸ್ವತಿಯ ಮುಖವನ್ನು ನೋಡಿದನು. ಬಿಳಿಚಿಕೊಂಡ ಬ್ರಹ್ಮನ ನಾಲ್ಕು ಮುಖಗಳನ್ನೂ ನೋಡಿ, ಸರಸ್ವತಿ ಸರಸಭಾವನೆಯ ಮುಗುಳ್ನಗುವನ್ನು ಮಾತ್ರ ಸೂಸಿದಳು.

"ಇದೇಕೆ ಹೀಗಾಯಿತು? ಸಕ್ರಮವಾದ ಸೃಷ್ಟಿಯನ್ನು ಮಾಡಲಿಕ್ಕಾಗಿಯೇ, ಸತ್ಸಂಕಲ್ಪ ದಿಂದಲೇ ನಡೆಸಿದ್ದೇನಲ್ಲ? ಹೀಗೆ ವಿಪರೀತ ವಾಯಿತು ಏತರಿಂದ?" ಎಂದು ತನಗೆ ತಾನೇ ಹೇಳಿಕೊಂಡಂತೆ, ತಲೆಗಳನ್ನು ಮೇಲೆತ್ತಿ ಗಟ್ಟಿಯಾಗಿ ಬ್ರಹ್ಮನು ಕೂಗಿದನು. ಅವನ ಪ್ರಶ್ನೆ ದಶ ದಿಶೆ ಗಳಲ್ಲಿಯೂ ಮಾರ್ಮೊಳಗಿತು.

ಒಂದೂ ತೋರದೆ, ಭ್ರಮಾವೀಕ್ಷಣದಿಂದ ದಿಕ್ಕು ಗಳನ್ನು ನೋಡುವ ಬ್ರಹ್ಮನಿಗೆ, ದೊಡ್ಡದೊಂದು ಪ್ರಕಾಶವು ಕಾಣಲು ತೊಡಗಿತು. ಆ ಪ್ರಕಾಶದಲ್ಲಿ ಅದ್ಭುತವಾದೊಂದು ಮೂರ್ತಿ ಗೋಚರವಾಯಿತು. ಆ ಮೂರ್ತಿಯನ್ನು ನೋಡುತ್ತಿದ್ದಂತೆ ಮೊತ್ತ ಮೊದಲು ತಾನು ವಟಪತ್ರ ಶಾಯಿಯಾದ ಅದ್ಭುತ ಬಾಲಕನನ್ನು ನೋಡಿದ್ದು ನೆನಪಾಯಿತು ಬ್ರಹ್ಮನಿಗೆ. ಅದನ್ನು ತಾನು ಏನೋ ಭ್ರಮೆಯೆಂದು ಕೊಂಡು ನಿರ್ಲಕ್ಷ್ಯಮಾಡಿದ್ದು ತಪ್ಪಾಯಿತೇನೋ?

ಆ ಪ್ರಕಾಶದ ನಡುವೆ ಗೋಚರವಾದ ಮೂರ್ತಿಗೆ ಆನೆಯ ತಲೆಯಿದ್ದಿತು. ನಾಲ್ಕು ಕೈಗಳಲ್ಲಿ ಅಂಕುಶ, ಕಲಶ, ಪರಶು, ಪಾಶಗಳನ್ನು ಧರಿಸಿಕೊಂಡಿದ್ದನು.




ಪೂರ್ಣಚಂದ್ರನಂತೆಯೇ ಪ್ರಕಾಶಿಸುತ್ತಿದ್ದನು. ಬೆಳ್ಳಗಾಗಿರುವ ಅವನ ಉತ್ತರೀಯವು ಆಕಾಶದಲ್ಲೆಲ್ಲಾ ಹರಡಿ ರಪರಪವೆಂದು ಹಾರಾಡಿಕೊಂಡಿತ್ತು.

ಆ ಮೂರ್ತಿಯನ್ನು ನೋಡಿ ಸರಸ್ವತಿ ನವೋತ್ಸಾಹದಿಂದ ಓಂಕಾರನಾದವನ್ನು ಎಬ್ಬಿಸಿ ವೀಣೆ ಮೀಂಟತೊಡಗಿದಳು. ದಶದಿಶೆಗಳಲ್ಲಿಯೂ ಆ ಓಂಕಾರವು ಪ್ರತಿಧ್ವನಿಸತೊಡಗಿತು. ಸರಸ್ವತೀ ದೇವಿಯ ಬೆರಳುಗಳು ತನ್ನಂತಾನೇ ನಾದ ನಾಮ ಕ್ರಿಯಾರಾಗವನ್ನು ಮೀಂಟುತ್ತಾ, ಮಾಯಾಮಾಳವ ಗೌಳ ರಾಗಕ್ಕೆ ಮಾರ್ಪಡುತ್ತಾ, ಹಂಸಧ್ವನಿ ರಾಗವನ್ನು ಆಕ್ರಮಿಸಿಕೊಂಡುವು.

ಗಜಾನನನಾಗಿ ಸಾಕ್ಷಾತ್ಕರಿಸಿದ ಆ ದಿವ್ಯಮೂರ್ತಿ, ವಟಪತ್ರದ ಮೇಲೆ ನಿಂತುಕೊಂಡು ಬ್ರಹ್ಮನನ್ನು ಅಭಯಮುದ್ರೆಯಿಂದ ಆಶೀರ್ವದಿಸಿದನು. ಅವನ ಸುತ್ತಲೂ ಶರತ್ಕಾಲದ ಹುಣ್ಣಿಮೆಯದಿನದ ಬೆಳುದಿಂಗಳಂತಹ ಶಾಂತಪ್ರಕಾಶವು ಆವರಿಸಿಕೊಂಡಿದ್ದಿತು.

"ಬ್ರಹ್ಮದೇವಾ ! ಮೊದಲು ನೀನು ನನ್ನನ್ನು ಕಂಡೂ ಕುರುಡನಾದೆ ! ಈಗ ತಪ್ಪು ತಿಳಿದು ಪಶ್ಚಾತ್ತಾಪ ತೋರಿದೆ. ಅಂತಲೇ ಹರಸಿದ್ದೇನೆ" ಎಂದು ಗಜ ಮುಖನಿಂದ ಮಾತುಗಳು ದುರಿದುವು.

ಬ್ರಹ್ಮನು ನಾಲ್ಕು ಕೈಗಳನ್ನೂ ಇಜ್ಜೋಡಾಗಿ ಜೋಡಿಸಿ ನಮಸ್ಕರಿಸುತ್ತ "ಮಹಾನುಭಾವಾ ? ಅದ್ಭುತ ಮೂರ್ತಿಯಾದ ನೀನು ಯಾರು ? ನೀನು ಯಾರೆಂದು ತಿಳಿಯಲು ಅಶಕ್ತನಾದ ಈ ಅಜ್ಞಾನಿಯನ್ನು ಅನುಗ್ರಹಿಸು.' ನೀನೇ ಈ ಸೃಷ್ಟಿ ವಿಕಾರಗಳನ್ನು ಹೋಗಲಾಡಿಸಬೇಕು." ಎಂದು ಪ್ರಾರ್ಥಿಸಿದನು.

"ಅಪ್ಪಾ, ಬ್ರಹ್ಮದೇವಾ ! ಸಂಕಲ್ಪದ ಹಿಂದೆಯೇ ವಿಕಲ್ಪವೂ ಬೆಂಬತ್ತಿಕೊಂಡಿರುತ್ತದೆ. ಅದುವೇ ವಿಘ್ನ. ಆ ವಿಘ್ನವನ್ನು ಅಡ್ಡಗಟ್ಟಿ ತಡೆದು ಸಂಕಲ್ಪಿತ ಕಾರ್ಯವನ್ನು ನೆರವೇರಿಸುವವನಾದ ನಾನು ವಿಘ್ನೇಶ್ವರನಾಗಿದ್ದೇನೆ. ವಿಘ್ನಗಳಿಗೆಲ್ಲಾ ನಾಯಕತ್ವವನ್ನು ವಹಿಸಿ, ವಿಕಲ್ಪವನ್ನು ನನ್ನ ಕೊಡಲಿಯಿಂದ ಛೇದಿಸಿ, ಸಂಕಲ್ಪಿಸಿದ ಕಾರ್ಯವನ್ನು ತುಂಬಿದ ಕಲಶದ ಹಾಗೆ ಜಯಪ್ರದವಾಗಿಸುವ ವಿಘ್ನ ವಿನಾಯಕನಾಗಿರುವವನು ನಾನು. ಈ ಶ್ವೇತ ವರಾಹಕಲ್ಪದಲ್ಲಿ ನನ್ನನ್ನು ನೆನೆಸದೆ ಯಾವ ಕಾರ್ಯವೂ ಸುಗಮವಾಗಿ ಈಡೇರಲಾರದೆಂಬುದನ್ನು ಸೂಚಿಸಲಿಕ್ಕೇ ಈ ಕಲ್ಪೋದಯ ಕಾಲದಲ್ಲಿ ನನ್ನ ಬಾಲರೂಪದಿಂದ ನಿನಗೆ ದರ್ಶನವಿತ್ತೆ. ನೀನು ನಿದ್ದೆಯ ಮಂಪರಿನಲ್ಲಿ ಲಕ್ಷಿಸದೆ ಹೋದೆ. ನಿನ್ನ ಸೃಷ್ಟಿಯ ಮೂಲವಸ್ತುಗಳಾದ ಪಂಚಭೂತಗಳೆನಿಸುವ, ಪೃಥ್ವಿ, ನೀರು, ಅಗ್ನಿ, ವಾಯು, ಆಕಾಶವೆಂಬ ಭೂತಗಣಗಳಿಗೆ ನಾನೇ ಅಧಿಪತಿಯಾಗಿರುವೆನು. ಆಹಾರಧಾನ್ಯಗಳನ್ನು ಕೊಟ್ಟು ಫಲಿಸುವ ಸಸ್ಯಗಳನ್ನು ನಾಶನಮಾಡುವ ಮದೋನ್ಮತ್ತವಾದ ಆನೆಗಳಂತಹ ವಿಘ್ನಗಳನ್ನು ನನ್ನ ಹದನಾದ



ಅಂಕುಶದಿಂದ ಹದ್ದುಮೀರದಂತೆ ಮಾಡಿ, ಅವುಗಳನ್ನು ನನ್ನ ಬಲವಾದ ಪಾಶದಿಂದ ಎಳೆದು ಕಟ್ಟುವ ನನ್ನನ್ನು ವಿಘ್ನೇಶ್ವರನೆಂದೇ ಕರೆ!" ಎಂದು ವಿಘ್ನೇಶ್ವರನು ಮೇಘ ಗಂಭೀರಧ್ವನಿಯಿಂದ ಹೇಳಿದನು. ಆಗ ಬ್ರಹ್ಮನು ವಿಘ್ನೇಶ್ವರನಿಗೆ ಕೈಮುಗಿದು, "ದೇವಾ, ವಿಘ್ನೇಶ್ವರ! ನಾನು ಸೃಷ್ಟಿಸಿದ ಸವ್ಯವಾದುವೆಲ್ಲಾ ಅಪಸವ್ಯವಾಗಿ ಹೋದುವು. ಇಷ್ಟೊಂದು ವಿಪರೀತವಾಗಲು ನೀನೇ ಕಾರಣ ನೆನ್ನುವೆಯಾ? ಈಗ ನೋಡಲಾಗದಂತಹ ವಿವಿಧ ವಕ್ರತೆಗಳೆಲ್ಲಾ ಹೋಗಿ ಸೃಷ್ಟಿಗಳು ಸರಿಯಾಗುವ ಮಾರ್ಗ ಹೇಗೆ?" ಎಂದು ಕೇಳಿದನು.

"ಬಹ್ಮದೇವಾ! ವಿಘ್ನಗಳೆಂದರೆ ಏನೆಂದು ನಿನಗೆ ತಿಳಿಯಬೇಕೆಂತಲೇ ಹೀಗೆಲ್ಲಾ ನಡೆಯಿತು. ಆಗ ನನ್ನನ್ನು ಕುರಿತು ನೀನು ಆಲೋಚಿಸಲೇ ಇಲ್ಲ. ನನ್ನನ್ನು ಕುರಿತು ಆಲೋಚಿಸುವುದೆಂದರೆ ವಿಘ್ನಗಳನ್ನು ಕುರಿತು ಮುಂಜಾಗ್ರತೆ ತೆಗೆದುಕೊಳ್ಳುವುದೆಂದೇ ಅರ್ಥ. ಅಜ್ಞಾನವನ್ನು ಎಳೆದುಕೊಳ್ಳುವ ನಾನು ಅಜ್ಞಾನ ಸ್ವರೂಪನು. ನಿನ್ನಿಂದ ತೊಡಗಿ, ಬುದ್ಧಿಯಿರುವ ಪ್ರತಿ ಜೀವಿಯೂ ಕಾರ್ಯರಂಗಕ್ಕೆ ಇಳಿಯುವ ಮೊದಲು, ವಿಘ್ನವು ಬಾರದಂತೆ ಜಯಪ್ರದವಾಗಲು ತಕ್ಕ ಜಾಗ್ರತೆಯನ್ನೂ, ಜ್ಞಾನವನ್ನೂ ಪಡೆದಿರಲೇ ಬೇಕು. ಆನೆ ತನ್ನ ಅಡಿಗಳನ್ನು ತೆಗೆದಿಡುವುದಕ್ಕೆ ಮೊದಲು, ನೆಲದ ಗಟ್ಟಿತನವನ್ನು ತಿಳಿದುಕೊಂಡೇ ನಡೆಯುತ್ತದೆ. ಪ್ರಾಣಿಗಳಲ್ಲಿ ಆನೆಯ ಬುದ್ಧಿಬಲವು ಅದರ ಹಾಗೆಯೇ ಬಹಳ ದೊಡ್ಡದು. ಆನೆಯ ಹಾಗೆ ವಿಶೇಷ ಮೇಧಸ್ಸಿನೊಂದಿಗೆ ಕೂಡಿರಬೇಕೆಂತಲೇ ನಾನು ಗಜಾನನನಾಗಿದ್ದೇನೆ. ನೀನು ನಿದ್ದೆಯಲ್ಲಿದ್ದ ಕಾಲದಲ್ಲಿ ಸೋಮಕಾಸುರನು ಬಂದು ನಿನ್ನ ನಾಲ್ಕು ವೇದಗಳನ್ನೂ ಅಪಹರಿಸಿಕೊಂಡು ಹೋಗಿ ಸಮುದ್ರದ ಅಡಿಯಲ್ಲಿ ಅಡಗಿಸಿಟ್ಟನು. ಮಹಾವಿಷ್ಣು ಮತ್ಸ್ಯಾವತಾರವನ್ನೆತ್ತಿ ಸೋಮಕಾಸುರನನ್ನು ಸಂಹರಿಸಿ ನಿನ್ನ ವೇದಗಳನ್ನು ಭದ್ರವಾಗಿ ತಂದು ವಟಪತ್ರದ ಮೇಲೆ ಮಲಗಿದ್ದ ನನ್ನ ಹತ್ತಿರ ಇಟ್ಟಿದ್ದಾನೆ. ಇಕೋ, ಅವುಗಳನ್ನು ತಿರುಗಿ ಪಡೆದು ಸೃಷ್ಟಿಕಾರ್ಯವನ್ನು ನಿರ್ವಹಿಸು" ಎಂದು ಹೇಳಿ ವಿಘ್ನೇಶ್ವರನು ಬ್ರಹ್ಮನಿಗೆ ಚತುರ್ವೇದಗಳನ್ನು ಕೊಟ್ಟನು.

ಬ್ರಹ್ಮನು ಅವುಗಳನ್ನು ಪಡೆದುಕೊಂಡು, ಪರಮಾನಂದದಿಂದ ವಿಘ್ನೇಶ್ವರನನ್ನು ಸ್ತುತಿಸುತ್ತ, "ಓ ದಯಾನಿಧಿಯೇ! ಈ ವೇದಗಳನ್ನೂ ನಾನು ಮರೆತಿದ್ದೆ. ಇನ್ನು ಮೇಲೆ ಪ್ರತಿಕಲ್ಪಾಂತದಲ್ಲಿಯೂ ಸೃಷ್ಟಿ ಸಂಕಲ್ಪ ಮಾಡುವ ಮೊದಲು ನಿನ್ನನ್ನು ಧ್ಯಾನಿಸಿ, ಮನಸಾರೆ ಪೂಜಿಸಿ ಆಮೇಲೆಯೇ ಕಾರ್ಯರಂಗಕ್ಕೆ ಇಳಿಯುವ ಹಾಗೆ ವರವನ್ನು ಅನುಗ್ರಹಿಸು. ಈ ವಕ್ರಸೃಷ್ಟಿಯನ್ನು ಉಪಸಂಹರಿಸುವಹಾಗೆ ಮಾಡು ಗಣೇಶಾ!" ಎಂದು ಬೇಡಿದನು. ವಿಘ್ನೇಶ್ವರನ ಪ್ರಭಾವದಿಂದ ಅದುವರೆಗೆ ನಡೆದ

ಸೃಷ್ಟಿಯ ವಕ್ರ ಅಕ್ರಮಗಳೆಲ್ಲ ಕ್ಷಣಮಾತ್ರದಲ್ಲಿ ಮಾಯವಾಗಿ ಹೋದುವು. ಆಗ ವಿಘ್ನೇಶ್ವರನು ಮತ್ತೆ ಬ್ರಹ್ಮನನ್ನು ಕುರಿತು, "ಓ ! ಬ್ರಹ್ಮದೇವಾ ! ನಿನ್ನ ಮೂಲಕ ವಿಶ್ವವೆಲ್ಲಾ ಕೇಳಲಿ ! ವಕ್ರತೆಗಳನ್ನು ತುಂಡು ತುಂಡು ಮಾಡುವವನು ನಾನಾದುದರಿಂದ ನಾನು ವಕ್ರತುಂಡನೆಂಬ ಸಾರ್ಥಕ ನಾಮಧೇಯದವನಾಗಿ, ನನ್ನ ಸೊಂಡಿಲನ್ನು ವಕ್ರವಾಗಿಯೇ ಇಟ್ಟುಕೊಳ್ಳುತ್ತೇನೆ. ವಕ್ರತುಂಡನಾದ ನನ್ನನ್ನು ಧ್ಯಾನಿಸಿ ತಲೆಹಾಕುವ ಯಾವ ಕಾರ್ಯವಾದರೂ ಹಾಳು ಬೀಳಲಾರದು. ನೀನು ಕೇಳಿಕೊಂಡ ಹಾಗೆ ವರ ಕೊಟ್ಟಿದ್ದೇನೆ. ನನ್ನನ್ನು ಸ್ಮರಿಸು. ಸೃಷ್ಟಿಕಾರ್ಯ ನಡೆಸು. ಸೃಷ್ಟಿ ಮಾಡುವುದೂ ಒಂದು ಕಲೆ. ಆ ಕಲೆಗೆ ಯಾವ ಅಸಮಂಜಸಗಳೂ ಬಾರದಂತೆ, ಜಗತ್ತು ನೀನು ಎಣಿಸಿಕೊಂಡಂತೆಯೇ ಲೆಕ್ಕತಪ್ಪದೆ, ಕ್ರಮತಪ್ಪದೆ ಕಲಾನಿಲಯವಾಗಿ ಬೆಳಗಿಕೊಂಡಿರುತ್ತದೆ. ನಿನಗೆ ಹೇಗೆ ಸಮೀಪದವನಾದೆನೋ, ಹಾಗೆಯೇ ಜಗತ್ತಿನಲ್ಲಿರುವ ಎಲ್ಲರಿಗೂ, ಈ ಶ್ವೇತ ವರಾಹ ಕಲ್ಪದಲ್ಲಿ ನಾನು ಎಟಕುವವನಾಗಿದ್ದು ಪ್ರಥಮ ಪೂಜೆಗಳನ್ನು ಸ್ವೀಕರಿಸುವವನಾಗಿ, ವಿಘ್ನೇಶ್ವರನೆಂದು ವಿಘ್ನಗಳಿಂದ ಕಾಪಾಡುತ್ತಾ ಇರುವೆನು. ಸಂಕಲ್ಪಸಿದ್ಧಿಯನ್ನು ಸಾಧಿಸುವಂತಹ ಸಿದ್ಧಿ ವಿನಾಯಕನಾಗಿರುವೆನು. ಸಕಲ ಗಣಗಳಿಗೂ ಅಧಿಪತಿಯಾಗಿ ಗಣಪತಿಯೆನಿಸುವಂತೆ ಶಿವ ಪಾರ್ವತಿಯರಿಗೆ ಪುತ್ರನಾಗಿ ಅವತಾರವೆತ್ತುತ್ತೇನೆ !" ಎಂದು ಹೇಳಿ ಬ್ರಹ್ಮನನ್ನು ಹರಸಿ ಅಂತರ್ಧಾನನಾದನು.

ಆ ಕೂಡಲೇ ಸರಸ್ವತೀದೇವಿ ಹಿಂದೋಳವನ್ನು ಪ್ರಾರಂಭಿಸಿ, ಶ್ರೀರಾಗದಿಂದ ಮಹಾಕಾಶವೆಲ್ಲಾ ತುಂಬಿ ಪುಲಕಿತವಾಗುವ ಹಾಗೆ ವೀಣೆಯಿಂದ ನಾದ ವೆಬ್ಬಿಸಿದಳು. ಬ್ರಹ್ಮನು "ವಿಘ್ನೇಶ್ವರಾಯನಮಃ" ಎಂದು ಸೃಷ್ಟಿಯನ್ನು ಪ್ರಾರಂಭಿಸಿದಾಗ, ಸೃಷ್ಟಿ ಮತ್ತಿಷ್ಟು ಅಂದವಾಗಿ ನಿರ್ವಿಘ್ನವಾಗಿ ಸಾಗ ತೊಡಗಿತು. ಘನಗಂಭೀರವಾದ ಪರ್ವತ ಪಂಕ್ತಿಗಳೂ, ಅಮೃತ ಜಲಗಳಿಂದ ನದಿ ಸರೋವರಗಳೂ, ಸುಂದರ ವನಗಳೂ ಬಣ್ಣಬಣ್ಣಗಳ ಚಿತ್ರಗಳಂತಹ ಪ್ರಾಣಿಗಳೂ, ಪಕ್ಷಿಗಳೂ, ಶಾರೀರಕವಾಗಿ, ಮಾನಸಿಕವಾಗಿ ಬಲವನ್ನೂ ಉನ್ನತಿಯನ್ನೂ ಪಡೆಯಲಾಗುವಂತಹ ಮನುಷ್ಯರೂ ತುಂಬುತ್ತ ಬ್ರಹ್ಮಸೃಷ್ಟಿಯೊಂದು ಕಲಾನಿಲಯವೇ ಆಯಿತು. ವಾಗ್ದೇವಿಯಾದ ಸರಸ್ವತಿ ತನ್ನ ವಾಣಿಯನ್ನು ಸಂಗೀತದಂತೆ ಪ್ರಾಣಿಕೋಟಿಗಳಿಗೆ ಪ್ರಸಾದಿಸಿದಳು. ಜೀವಕೋಟಿ ಸುಲಕ್ಷಣವಾಗಿ ಬೆಳೆಯತೊಡಗಿತು. ಬೀಳಲು ಹರಡುವ ಆಲದ ಮರದ ಹಾಗೆ ಜಗತ್ತು ವಿಶಾಲವಾಗತೊಡಗಿತು.





# ಹೆಗ್ಗಲ್ಲಿನ ಮುಖ

ಅನೇಕ ನೂರು ವರ್ಷಗಳ ಹಿಂದೆ ಅರಾವಳೀ ಪರ್ವತ ಪ್ರಾಂತದಲ್ಲಿ ದೊಡ್ಡದಾದೊಂದು ಗುಡ್ಡದ ಮೇಲೆ ಹೆಬ್ಬಂಡೆಯೊಂದಿದ್ದಿತು. ದೂರದ ಊರಿನವರು ಆ ಬಂಡೆಯನ್ನು ನೋಡುವಾಗ ಯಾವನೋ ಮಹಾ ಶಿಲ್ಪಿಯೊಬ್ಬನು ಒಬ್ಬ ಮನುಷ್ಯನ ಮುಖದ ಆ ಕೃತಿಯನ್ನು ಕೊರೆದುಕೆತ್ತಿಮಾಡಿದಂತೆ ಕಾಣುತ್ತಿತ್ತು. ಆದರೆ ನಿಜಕ್ಕೂ ಅದು ಯಾವ ಶಿಲ್ಪಿಯೂ ಮಾಡಿದು ದಲ್ಲ. ಆ ಮುಖಾಕೃತಿ ಪ್ರಕೃತಿ ಸಿದ್ಧವಾಗಿಯೇ ಏರ್ಪಟ್ಟಿತ್ತು.

ಸುತ್ತುಮುತ್ತಲಿನ ಅನೇಕ ಊರುಗಳ ಜನರಿಗೆ ದಿನಾ ಅದು ಕಾಣುತ್ತಿತ್ತು. ಆ ಮುಖದಲ್ಲಿ ಜನರು ಕರುಣೆ, ಶಾಂತ, ದಯೆ ಮೊದಲಾದ ಉನ್ನತ ಭಾವ ಗಳನ್ನು ಕಾಣುತ್ತಿದ್ದರು. ಆ ಮುಖದ ಫಾಲಭಾಗವು ವಿಶಾಲವಾಗಿದ್ದು, ಜ್ಞಾನವನ್ನು ಪ್ರತಿಬಿಂಬಿಸುತ್ತಿದ್ದಿತು. ಕಣ್ಣುಗಳು ಪ್ರಜೆಗಳನ್ನು ದಯೆಯಿಂದಲೂ ವಾತ್ಸಲ್ಯ ದಿಂದಲೂ ನೋಡುವ ಹಾಗೆಕಾಣುತ್ತಿತ್ತು. ಒಟ್ಟು ಮುಖಮುದ್ರೆ ಶಾಂತ ಗಂಭೀರವಾಗಿತ್ತು.

ಜನರು ಆ ಮುಖವನ್ನು ಹೆಗ್ಗಲ್ಲಿನ ಮುಖವೆಂದು ಹೇಳುತ್ತ ಅದನ್ನು ಕುರಿತು ಅನೇಕ ಕಥೆಗಳನ್ನು ಹೇಳುತ್ತಿದ್ದರು. ಅದೇ ಹೋಲಿಕೆಯ ಮಹನೀಯ ನೊಬ್ಬನು ಹಿಂದೆ ಒಂದು ಕಾಲದಲ್ಲಿ ಇದ್ದನೆಂದೂ, ಅವನ ದಯೆಯಿಂದ ಜನರೆಲ್ಲಾ ತುಂಬಾ ಸುಖ ಶಾಂತಿ ಸಂತೋಷಗಳನ್ನು ಅನುಭವಿಸಿಕೊಂಡಿದ್ದರೆಂದೂ ಕೆಲವರು ಹೇಳುತ್ತಿದ್ದರು.

ಕೆಲವು ವರ್ಷಗಳ ಹಿಂದೆ ಆ ಪ್ರಾಂತಗಳಿಗೆ ಒಬ್ಬ ಮುನೀಶ್ವರನು ಬಂದನು. ಸುತ್ತುಮುತ್ತಲಿನ ಗ್ರಾಮ ಗಳಲ್ಲಿಯ ನೂರಾರು ಮನುಷ್ಯರು ಆ ಮುನೀಶ್ವರ ನನ್ನು ನೋಡಲು ಹೋದರು. ಅವರಲ್ಲಿ ಕೆಲವರು ಆ ಹೆಗ್ಗಲ್ಲಿನ ಮುಖವನ್ನು ಕುರಿತು ಮುನೀಶ್ವರ ನೊಂದಿಗೆ ಕೇಳಿದರು. ಆ ಮುನೀಶ್ವರನು ಸ್ವಲ್ಪ ಹೊತ್ತು ಆ ಮುಖವನ್ನು ದೃಷ್ಟಿಸಿ ನೋಡಿ ತಲೆ ಯೊಲಿಯುತ್ತ, "ಆ ಮುಖವು ಹಿಂದೆ ಹುಟ್ಟಿದ ಮನುಷ್ಯನದು ಅಲ್ಲ. ಮುಂದೆ ಒಂದಾನೊಂದು ದಿನ ಇದೇ ಹೋಲಿಕೆಯ ಮುಖದವನು ಈ ಪ್ರಾಂತದಲ್ಲಿ ಕಾಣುತ್ತಾನೆ. ಅವನಿಂದ ಜನರಿಗೆ ಎಷ್ಟೋ ಉಪಕಾರ ಗಳು ಆಗಲಿವೆ" ಎಂದನು.

ಆ ಮೇಲೆ ಅನೇಕ ದಶಾಬ್ದಗಳು ಕಳೆದು ಹೋದುವು. ಮುನೀಶ್ವರನು ಹೇಳಿದ ವೃತ್ತಾಂತ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ವನ್ನು ಒಂದು ತಲೆಮಾರಿನವರು ಇನ್ನೊಂದು ತಲೆ ಮಾರಿನವರಿಗೆ ಕಟ್ಟುಕಥೆಯ ಹಾಗೆ ಹೇಳುತ್ತಿದ್ದರು. ಅನೇಕರಿಗೆ ಆ ಕಥೆಯ ಮೇಲೆ ವಿಶ್ವಾಸ ಕೂಡಾ ಹೋಯಿತು.

ಆದರೆ ವಿಶ್ವಾಸವನ್ನು ಕಳೆದುಕೊಳ್ಳದವರೂ ಹಲವರಿದ್ದರು. ಅಂಥವರಲ್ಲಿ ವಸು ಎಂಬ ಹುಡುಗ ನೊಬ್ಬನಿದ್ದನು. ಅವನು ಪುಟ್ಟಬಾಲಕನಾಗಿದ್ದಾಗಲೇ ಅವನ ತಾತ ಅವನನ್ನು ಎತ್ತಿಕೊಂಡು, ಆ ಹೆಗ್ಗಲ್ಲಿನ ಮುಖದ ಬೊಂಬೆಯನ್ನು ತೋರಿಸುತ್ತಾ, ಮುನೀಶ್ವರನು ತನ್ನ ಚಿಕ್ಕಂದಿನಲ್ಲಿ ಹೇಳಿದ ಮಾತುಗಳನ್ನು ತನ್ನ ಮೊಮ್ಮಗನಿಗೆ ಹೇಳುತ್ತಿದ್ದನು. ಅನೇಕ ವರ್ಷಗಳವರೆಗೆ ದಿನಾ ಆ ವಿಷಯವನ್ನು ಕೇಳುತ್ತಿದ್ದುದರಿಂದ ಮುನೀಶ್ವರನು ಹೇಳಿದ ಜೋಸ್ಯವು ವಸುವಿನ ತಲೆಗೆ ಚೆನ್ನಾಗಿ ಅಂಟಿಕೊಂಡಿತ್ತು.

ತನ್ನ ಕಣ್ಣೆದಿರಿನಲ್ಲಿಯೇ ಮುನೀಶ್ವರನ ಮಾತು ಫಲಿಸುವುದೆಂದು ಅವನಿಗೆ ಗಟ್ಟಿ ನಂಬುಗೆ ಉಂಟಾತ್ತು. ಅಂತಹ ಮಹಾ ಪುರುಷನನ್ನು ಕಾಣಲು ಅವನು ಹಾತೊರೆದು ಕಾದುಕೊಂಡೇ ಇದ್ದನು.

ಹೀಗಿರುವಾಗ ವಸು ವಾಸಮಾಡುವ ಊರಿಗೆ ಮಹಾಜ್ಞಾನಿಯಾದ ಸನ್ಯಾಸಿಯೊಬ್ಬನು ಆಗಮಿಸಿದನು. ಅವನು ವೇದಗಳನ್ನೂ, ಉಪನಿಷತ್ತುಗಳನ್ನೂ ಚೆನ್ನಾಗಿ ಕಾಯಿಸಿ ಶೋಧಿಸಿಕೊಂಡವನೆಂದೂ, ತರ್ಕ ವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ಮಹಾ ಪರಿಣತನೆಂದೂ ಎಲ್ಲರೂ ಮಾತಾಡಿಕೊಳ್ಳುತ್ತಿದ್ದರು. ಅವನು ಜನರನ್ನು ಸೇರಿಸಿ ತತ್ವೋಪದೇಶಗಳನ್ನು ಬೋಧಿಸುತ್ತಿದ್ದನು. ಅವನ ಮಾತುಗಳನ್ನು ಕೇಳಿದವರೆಲ್ಲರೂ ಮೆಚ್ಚಿ ತಲೆದೂಗುತ್ತಿದ್ದರು.

ವಸು ಆ ಸನ್ಯಾಸಿಯ ಮುಖವನ್ನು ಪರೀಕ್ಷಿಸಿ ನೋಡುತ್ತಿದ್ದನು. ಅವನ ಮುಖಕ್ಕೂ ಹೆಗ್ಗಲ್ಲಿನ ಮುಖಕ್ಕೂ ಯಾವ ಹೋಲಿಕೆಯೂ ಕಾಣಲಿಲ್ಲ. ಆದರೂ ನಿರಾಶನಾಗದೆ ವಸು ಅವನು ಹೇಳುವ ದೊಡ್ಡ ದೊಡ್ಡ ಗಹನ ವಿಷಯಗಳನ್ನು ಮನಸ್ಸು ಕೊಟ್ಟು ಕೇಳುತ್ತಿದ್ದನು. ಆ ಸನ್ಯಾಸಿ ಹೇಳುವ ವಿಷಯಗಳು ದೊಡ್ಡದೆನ್ನಲು ಸಂದೇಹವೇ ಇಲ್ಲ. ಆದರೆ ಅವನಿಗೆ ಜನರ ಜೀವಿತ ವಿಧಾನವೂ, ಅವರ ಕಷ್ಟ ಸುಖಗಳೂ ಸ್ವಲ್ಪವೂ ತಿಳಿಯವು. ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ, ಸಾಮಾಜಿಕರೊಂದಿಗೆ ನಿತ್ಯವೂ ಕಲೆತು ಜೀವಿಸುವ ವಸುವಿಗೆ ಅದೆಲ್ಲಾ ಚೆನ್ನಾಗಿ ಗೊತ್ತಿತ್ತು.

ಅಲ್ಲದೆ ಆ ಸನ್ಯಾಸಿಗೆ ಮುಂಗೋಪದ ಗುಣ. ಅವನು ಬೋಧನೆ ಮಾಡುವಾಗ, ಯಾರಿಗೂ ಸೀನು ಬರಬಾರದು, ಕೆಮ್ಮು ಬರಬಾರದು. ಅಷ್ಟು ದೊಡ್ಡ ವಿಷಯಗಳನ್ನು ಕೇಳುವಾಗ ಪಾಮರರಿಗೆ ಏನಾದರೂ ಸಂದೇಹ ಬರುವುದು ಸಹಜವಷ್ಟೆ? ಅಂತಹ ಸಂದೇಹದಿಂದ ಯಾರೂ ಪ್ರಶ್ನೆ ಕೇಳಲೂ ಕೂಡದು. "ನಿಮ್ಮ ಕರ್ಮ, ಯೋಗ್ಯತೆಯುಳ್ಳವರು ಅರ್ಥ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಬಾಯಿ

ಮುಚ್ಚಿ ಸುಮ್ಮನಿರಬೇಕು. ಮಧ್ಯೆ ಮಧ್ಯೆ ಪ್ರಶ್ನೆ ಕೇಳಿ ತೊಂದರೆ ಕೊಡಬಾರದು." ಎಂದು ಗುಡುಗುತ್ತಿದ್ದನು.

ಬರಬರುತ್ತ ಜನರಿಗೆ ಆ ಸನ್ಯಾಸಿಯ ಮೇಲೆ ಭಕ್ತಿ ತಗ್ಗಿತು. ಅವನು ಬೋಧನೆಗಳನ್ನು ಕೇಳಲು ಹೋಗುವವರು ಕಡಿಮೆಯಾದರು. ಸ್ವಲ್ಪ ಕಾಲದಲ್ಲಿ ಆ ಸನ್ಯಾಸಿ ಅಲ್ಲಿಂದ ಎಲ್ಲಿಗೋ ಹೊರಟು ಹೋದನು.

ಮತ್ತೆ ಕೆಲವು ತಿಂಗಳು ಕಳೆಯುತ್ತಿರಲು ಆ ಪ್ರಾಂತಗಳಿಗೆ ಮಹಾಶೌರ್ಯ ಪರಾಕ್ರಮಿಯಾದ ಒಬ್ಬ ವೀರನು ಬಂದನು. ಅವನು ಅನೇಕ ಯುದ್ಧ ಗಳಲ್ಲಿ ಗೆದ್ದ ಮಹಾವೀರನು. ಅವನ ಇರುವ ಕಡೆ ಯಲ್ಲಿ ಶತ್ರು ಭಯವಿಲ್ಲವೆಂದೂ, ಪ್ರಜೆಗಳು ನಿಶ್ಚಿಂತೆಯಾಗಿ ಸುಖ ನಿದ್ರೆ ಮಾಡಬಹುದೆಂದೂ ಜನರು ಮಾತಾಡಿಕೊಳ್ಳುತ್ತಿದ್ದರು. ಮುನೀಶ್ವರನು ಹೇಳಿದ ಮಹನೀಯನು ಇವನೇನೋ ಎಂದು ವಸುವಿಗೆ ತೋರಿತು. ಆದರೆ ಆ ವೀರನ ಮುಖವು ಹೆಗ್ಗಲ್ಲಿನ ಮುಖಕ್ಕೆ ಸ್ವಲ್ಪ ಕೂಡಾ ಹೋಲುವ ಹಾಗಿರಲಿಲ್ಲ.

ಆದರ ಮೇಲೆ ಆ ವೀರಾಗ್ರೇಸರನು ಪ್ರಜೆಗಳ ಸುಖ ದುಃಖಗಳನ್ನು ತಿಳಿದವನಲ್ಲ. ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿರುವ ಮನುಷ್ಯರನ್ನು ಹೊತ್ತಲ್ಲದ ಹೊತ್ತಿಗೆ ತನ್ನ ಬಳಿಗೆ ಕರೆಯಿಸಿ ಅವರ ದುಡಿಮೆಗಳನ್ನು ಹಾಳು ಮಾಡುತ್ತಿದ್ದನು. ಕೆಲವರನ್ನು ಹೆದರಿಸಿ ಬಯ್ಯುತ್ತಿದ್ದನು. ಕ್ರಮವಾಗಿ ಅವನ ಮೇಲೆ ಪ್ರಜಾ ಸಮೂಹದ ಗೌರವ ಹೋಯಿತು. ಕೆಲವು ದಿನಗಳ ಮೇಲೆ ಅವನು ಬೇರೆ ಪ್ರಾಂತದ ಕಡೆಗೆ ಹೊರಟು ಹೋದನು.

ಇದು ನಡೆದ ಸ್ವಲ್ಪ ಕಾಲದ ಮೇಲೆ ಯಾವನೋ ಒಬ್ಬ ವಣಿಕ ಪುಂಗವನು ಆ ಪ್ರಾಂತಕ್ಕೆ ಬರುವನೆಂದು ಸಮಾಚಾರ ಬಂದಿತು. ಅವನು ಸಮುದ್ರದಲ್ಲಿ ವಿಶೇಷ ಗಳೊಂದಿಗೆ ದೊಡ್ಡ ದೊಡ್ಡ ವ್ಯಾಪಾರ ಮಾಡಿ ಕೋಟಿ ಗಟ್ಲೆ ಸಂಪಾದಿಸಿದವನಂತೆ. ಅವನು ಎರಡು ದಿನ



ತಂಗಿದ್ದ ಸ್ಥಳದಲ್ಲಿ ಸಿರಿ ಸಂಪತ್ತುಗಳು ತಾಂಡವಿಸಲು ತೊಡಗುವುದಂತೆ ! ಬಂಗಾರದ ಕೈಗಳಂತೆ ಅವನದು !

ಇಲ್ಲಿರುವ ಜನರೆಲ್ಲಾ ಕಷ್ಟ ಜೀವಿಗಳೆಂದೂ, ಈ ಕಡೆಯ ಗ್ರಾಮಗಳಲ್ಲಿ ಸಿರಿ ಸಂಪತ್ತುಗಳು ಕಡಿಮೆ ಯೆಂದೂ ವಸುವಿಗೆ ಗೊತ್ತಿತ್ತು. ಅಂತೆಯೇ ಆ ವರ್ತಕ ಶ್ರೇಷ್ಠನು ತಮ್ಮನ್ನೆಲ್ಲ ಉದ್ಧರಿಸಲು ಬರುತ್ತಾನೆಂದೂ, ಅವನ ಮುಖವು ಹೆಗ್ಗಲ್ಲಿನ ಮುಖಕ್ಕೆ ಹೋಲುವ ಹಾಗೆ ಇರುತ್ತದೆಂದೂ ವಸು ಅಂದು ಕೊಂಡನು. ಅವನು ಮಾತ್ರವಲ್ಲ, ಬೇರೆ ಕೆಲವರೂ ಹಾಗೆಯೇ ನಂಬಿದರು. ?

ಆದರೆ ಆ ವರ್ತಕನು ಬಂದು ತೀರಾ ನೋಡಿದ ಮೇಲೆ ಅವನ ಮುಖವು ಬೇರೊಂದು ವಿಧವಾಗಿ ದ್ದಿತು. ಆದರೂ ಅವನ ಬರುವಿಕೆಯಿಂದ ಊರಿನ ಸಿರಿ ಸಂಪತ್ತುಗಳು ಹೆಚ್ಚುವ ಹಾಗೆಯೇ ಕಾಣಿಸಿತು. ಅವನು ಹೊಲ ಗದ್ದೆಗಳಲ್ಲಿ ಹೊಸ ಬಗೆಯ ಬೆಳೆ ಗಳನ್ನು ಬೆಳೆಯಗೊಳಿಸಿದನು. ಬಂದ ಬೆಳೆಗಳನ್ನೆಲ್ಲ



ತಾನೇ ಕೊಂಡುಕೊಂಡನು. ಊರಿನೊಳಗಿನ ರೈತರಿಗೆ ಹಳೆಯ ಬೆಳೆಗಳಿಗಿಂತ ಈ ಹೊಸ ಪೈರುಗಳಿಂದ ತುಂಬಾ ಲಾಭ ಬಂದಿತು. ಆದುದರಿಂದ ಎಲ್ಲರ ಕೈಯಲ್ಲಿಯೂ ಹೆಚ್ಚಿಗೆ ಹಣ ಓಡಾಡತೊಡಗಿತು. ಬೇರೆ ಬೇರೆ ವೃತ್ತಿಗಳಲ್ಲಿರುವ ಯುವಕರನ್ನು ಕೂಡಾ ಆ ಕೋಟೀಶ್ವರನು ತುಂಬಾ ಪ್ರೋತ್ಸಾಹ ಪಡಿಸಿದನು. ಮತ್ತೆ ಒಂದು ವರ್ಷದ ಮೇಲೆ ಆ ಕೋಟೀಶ್ವರನು ಬೆಳೆದ ಪೈರುಗಳ ಬೆಲೆಗಳನ್ನು ತಗ್ಗಿಸಿದನು. ಆ ಹೊಸ ಬಗೆಯ ಬೆಳೆಗಳೂ, ವಸ್ತುಗಳೂ ಊರವರಿಗೆ ಒಗ್ಗುವಂತಹವು ಅಲ್ಲವಾದುದರಿಂದ ಕೋಟೀಶ್ವರನು ನಿರ್ಣಯಿಸುವ ಬೆಲೆಯನ್ನು ಒಪ್ಪಿಕೊಳ್ಳಲೇಬೇಕಾಯಿತು. ಇಲ್ಲದಿದ್ದರೆ ಅವುಗಳನ್ನು ಕೊಂಡುಕೊಳ್ಳುವವರೇ ಇಲ್ಲ!

ಅದಲ್ಲದೆ ಪ್ರಜೆಗಳು ತಿನ್ನುವ ಆಹಾರ ಪದಾರ್ಥಗಳೂ, ನಿತ್ಯಾಗತ್ಯದ ವಸ್ತುಗಳೂ ಅಲ್ಲೆಲ್ಲಿಯೂ ಸಿಗದೆ ಹೋದವು. ಅವುಗಳ ಬೆಲೆಗಳೂ ಹೆಚ್ಚಾಗತೊಡಗಿದವು. ಹೀಗಾಗಿ ಪ್ರಜಾ ಜೀವಿತದಲ್ಲಿ ಸಂಕ್ಷೋಭವೆದ್ದಿತು. ಅದುವರೆಗೆ ಹಾಯಾಗಿ ಜೀವಿಸಿಕೊಂಡಿದ್ದವರು ಕೆಲವರು ತೀರಾ ಬಡವರಾಗಿ ಬಿಟ್ಟರು. ಹೊಟ್ಟೆಯ ಬರವೂ ಹಣದ ಬರವೂ ಜೋಡಾಗಿ ಪ್ರಜೆಗಳ ಮೇಲೆ ಬಿದ್ದಿತು. ಕೋಟೀಶ್ವರನು ತನಗೆ ಬೇಕಾದ ಸರಕುಗಳನ್ನೆಲ್ಲಾ ಚೀಲಗಳಲ್ಲಿ ತುಂಬಿಸಿಕೊಂಡು ಗಾಡಿಗಳಲ್ಲಿ ಪೇರಿಸಿ ಬಂದ ದಾರಿಯಲ್ಲೇ ಹೊರಟು ಹೋದನು. ಇದನ್ನೆಲ್ಲಾ ನೋಡುತ್ತಿದ್ದ ವಸುವಿಗೆ ಪ್ರಜೆಗಳಿಗೆ ಬಂದ ಕಷ್ಟ ನೋಡಿ ದುಃಖ ಬಂದಿತು. ಅವನ ವಯಸ್ಸಿನೊಂದಿಗೆ ಬುದ್ಧಿ ಕೂಡಾ ವಿಕಸಿತವಾಗತೊಡಗಿತು.

ಮತ್ತೆ ಸ್ವಲ್ಪ ಕಾಲದ ಮೇಲೆ ಒಬ್ಬ ಮಹಾ ಕವಿ ಆ ಊರಿಗೆ ದಯಮಾಡಿದನು. ಆ ಕವಿಗೆ ಸಾಮಾನ್ಯ ಜನರ ಜೀವನವು ಹೇಗೆಂಬುದು ಚೆನ್ನಾಗಿ ತಿಳಿದಿತ್ತು. ಅಂತಲೇ ಅವನು ಸಾಮಾನ್ಯ ಪ್ರಜೆಗಳನ್ನು ಕುರಿತು ಗೀತಗಳನ್ನು ಬರೆದಿದ್ದನು. ಅವನ ಗೀತಗಳಿಗೆ ದೇಶದೊಳಗೆಲ್ಲಾ ಖ್ಯಾತಿ ಬರುತ್ತಿತ್ತು.

"ಈ ಕವಿಯ ಮುಖವು ತಪ್ಪದೆ ಹೆಗ್ಗಲ್ಲಿನ ಮುಖದಂತೆ ಇರಲೇಬೇಕು. ಮುನೀಶ್ವರನು ಹೇಳಿದ ಮಾತು ಹುಸಿ ಹೋಗದು" ಎಂದುಕೊಂಡನು ವಸು.

ಅಂತಹ ಪ್ರಸಿದ್ಧ ಕವಿ ಆ ಊರಿಗೆ ಬಂದ ಮೇಲೆ ವಸು ಬೇಗನೆ ಹೋಗಿ ಅವನ ದರ್ಶನ ಮಾಡಿದನು. ಅವನ ಮುಖದಲ್ಲಿ ಗುಡ್ಡದ ಹೆಗ್ಗಲ್ಲಿನ ಮುಖದ ಹೋಲಿಕೆ ಸ್ವಲ್ಪವೂ ಕಾಣಿಸಲಿಲ್ಲ. ಕವಿ ಹಾಡುಗಳನ್ನು ಹಾಡಿದನು. ಜನರು ಅವನ ಸುತ್ತಲೂ ಸೇರಿ "ಆಹಾ" ಎಂದು ತನ್ಮಯರಾದರು. ದೇವರಿಗಿಂತ ಹೆಚ್ಚಾಗಿಯೇ ಅವನನ್ನು ಪೂಜಿಸಿ ಗೌರವಿಸಿದರು. ಅವನಿಗೆ ಸಕಲ ಉಪಚಾರಗಳೂ ನಡೆದುವು. ಆದರೆ ಆ ಕವಿಗೆ ಪ್ರಜೆಗಳ ಮೇಲೆ ನಿಜವಾದ ಔದಾರ್ಯವೇನೂ ಇರಲಿಲ್ಲ. ಅವರ ಕಷ್ಟ ಸುಖಗಳನ್ನು ಕುರಿತು ಕವಿತೆ ಕಟ್ಟುವನೇ ಹೊರತು ಆಚರಣೆಯಲ್ಲಿ ಯಾವ

ಸಹಾನುಭೂತಿಯೂ ಕಾಣಿಸಲಿಲ್ಲ. ಆವನು ತನ್ನ ಗೀತಗಳಲ್ಲಿ ಜನರ ಕಷ್ಟ ಕಾರ್ಯಗಳನ್ನು ಕುರಿತು ಬಹು ಚೆನ್ನಾಗಿ ಹೊಗಳುತ್ತಿದ್ದನು, ಆದರೆ ಆ ಕಷ್ಟ ಕಾರ್ಯಗಳ ಮೇಲೆ ಅವನಿಗೆ ಗೌರವವಿರಲಿಲ್ಲ. ಕೆಲಸ ವೇನೂ ಮಾಡದೆ ಒಳ್ಳೆಯ ಪೋಷಾಕು ಧರಿಸಿದವ ರೊಂದಿಗೂ, ಹೆಚ್ಚು ಹಣ ಇರುವವರೊಂದಿಗೂ ಅವನು ತುಂಬ ಅನ್ಯೋನ್ಯವಾಗಿದ್ದನು.

"ಈ ಕವಿ ವಂಚಕನೇ ನಿಜ, ಇವನು ತನ್ನ ಕಾವ್ಯ ಗೀತಗಳಿಂದ ಪ್ರಜೆಗಳನ್ನು ವಂಚಿಸುವನೇ ಹೊರತು ಪ್ರವರ್ತನೆಯಿಂದ ಮೆಚ್ಚಿಸುವವನಲ್ಲ. ಅವನ ಪ್ರವರ್ತನೆಗಳೇ ಅವನ ನಿಜವಲ್ಲದೆ, ಗೀತಗಳಲ್ಲ, ಅವುಗಳಲ್ಲಿ ಎಷ್ಟೇ ಯಥಾರ್ಥವಿದ್ದರೂ ಏನು ಪ್ರಯೋಜನ?" ಎಂದುಕೊಂಡನು ವಸು.

ಕಡೆಗೆ ಪ್ರಜೆಗಳಿಗೂ ಆ ಕವಿಯ ನಿಜ ಗುಣ ತಿಳಿ ಯಿತು. ಅವನ ಮೇಲೆ ಆದರ ತೋರಿಸುವುದನ್ನು ಕಡಿಮೆ ಮಾಡಿದರು. ಸ್ವಲ್ಪ ಕಾಲದ ಮೇಲೆ ಆ ಕವಿ ಎತ್ತಲೋ ಹೊರಟು ಹೋದನು.

ಎಷ್ಟೋ ಮಹನೀಯರು ತನ್ನ ಕಣ್ಣೆದಿರೇ ಆ ಊರಿಗೆ ಬಂದು ಹೋದರು. ಒಬ್ಬರ ಮುಖವೂ ಆ ಹೆಗ್ಗಲ್ಲಿನ ಮುಖದಂತಿಲ್ಲ. ಆ ಬೊಂಬೆಯ ಮುಖದಲ್ಲಿರುವ ಔದಾರ್ಯ, ದಯೆ, ವಾತ್ಸಲ್ಯ ಯಾರಲ್ಲಿಯೂ ಕಾಣಲಿಲ್ಲ. ಆದುದರಿಂದ ಅಂಥವ ರೊಬ್ಬರಿಂದಲೂ ಪ್ರಜೆಗಳಿಗೆ ಉಪಕಾರವಾಗಲಿಲ್ಲ. ವಸು ಈ ವಿಧವಾಗಿ ಆಲೋಚಿಸುಕೊಂಡು ನಿಂತಿರು ವಾಗ, ಕೆಲವು ಮನುಷ್ಯರು ಆ ದಾರಿಯಾಗಿ ಬರುತ್ತ ವಸುವಿನ ಮುಖವನ್ನು ನೋಡಿ, ಆ ಹೆಗ್ಗಲ್ಲಿನ ಮುಖದ ಕಡೆಗೆ ನೋಡಿದರು. ಏನಾಶ್ಚರ್ಯ! ವಸುವಿನ ಮುಖವು ಅಚ್ಚವಾಗಿ ಆ ಹೆಗ್ಗಲ್ಲಿನ ಮುಖದಂತೆಯೇ ಇದ್ದಿತು!

ಈ ವಾರ್ತೆ ಕ್ಷಣ ಮಾತ್ರದಲ್ಲಿ ಸುತ್ತಮುತ್ತಣ ಗ್ರಾಮಗಳಿಗೆಲ್ಲಾ ಹರಡಿತು. ಗುಡ್ಡದ ಹೆಗ್ಗಲ್ಲಿನ ಮುಖವನ್ನು ಕುರಿತು, ಅದರ ಬಗ್ಗೆ ಪೂರ್ವಿಕರು ಹೇಳುತಿದ್ದ ಕಥೆಗಳನ್ನು ಕುರಿತು ಮರೆತು ಹೋದವರೆಲ್ಲಾ ವಸುವಿನ ಬಳಿಗೆ ಬಂದು, ಮೊತ್ತ ಮೊದಲನೇಬಾರಿ ಎರಡು ಮುಖಗಳಿಗೂ ಇರುವ ಸಾಮ್ಯತೆಯನ್ನು ನೋಡಿ ಆಶ್ಚರ್ಯಪಡ ತೊಡಗಿದರು.

ಮುನೀಶ್ವರನ ಅಮೋಘ ವಚನವು ಫಲಿಸಿತು. ವಸು ಅನೇಕಮಂದಿ ಮಹನೀಯರ ಹತ್ತಿರ ಕಲಿತು ಕೊಂಡ ವಿಷಯಗಳನ್ನು ಜನತೆಗೆ ಉಪಯೋಗ ವಾಗುವಂತೆ ಮಾಡುತ್ತ, ಪ್ರಜೆಗಳೊಳಗೆ ತಾನೊಬ್ಬ ನಾಗಿ, ಪ್ರಜೆಗಳ ಕಷ್ಟ ಸುಖಗಳನ್ನು ಹಂಚಿಕೊಂಡು, ಅವರಿಗೆಲ್ಲ ಐಶ್ವರ್ಯವೂ ಆನಂದವೂ ಆಗುವ ಮಾರ್ಗಗಳನ್ನು ತೋರಿಸುತ್ತ ಧನ್ಯಜೀವಿಯಾದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೧ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Devidas Kasbekar

★



Devidas Kasbekar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಫೆಬ್ರುವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯ್ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಡಿಸೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಇನ್ನೂ ಸೋಲ್ಲಿಲ್ಲಾ ಅಂತೀಯಾ?

ಎರಡನೇ ಫೋಟೋ: ಸಾಕ್ಷಿಗಳು ನಾವಿದ್ದೇವೆ ಗೊತ್ತಾ?

ಕಳುಹಿಸಿದವರು: ಮಾಸ್ಟರ್ ಉದಯ

೧೮೯೦/II ಆರ್. ಎಚ್. ಎಸ್. ಕ್ವಾರ್ಟರ್ಸ್, ಕಾರವಾರ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

## ಮುದ್ದು ಮಗುವಿಗೆ ಉಪಚಾರ

## ನಿಮಗೂ ಸಂತಸದ ಸತ್ಕಾರ

"ವಾಹ್-ಮಜಾ! ನಂಗೇನು ಸಿಕ್ತು ನೋಡಿ—
ನಾನು ಪಪ್ಪನ ಹುಡುಗ, ಅದ್ಕೇ ಪಪ್ಪ
ರಾವಳ್‌ಗಾಂವ್ ಎಕ್ಲೇರ್ಸ್ ತಂದು ಕೊಡ್ತಾನೆ.
ನಂಗೆ ಕೋಕೋದ್ದೂ ಇಷ್ಟ, ಕೊಬ್ರಿದ್ದೂ ಇಷ್ಟ.
ಅದ್ರೆ ಪಪ್ಪ ಒಳ್ಳೇ ಘಾಟಿ—
ತನಗೇಂತ ಬೇರೆ
ಇಟ್ಕೊಂಡು ತಿನ್ತಾನೆ."



ಹೊಸತು!
ಕಡಿದು,
ಜಗಿದು-ತಿನ್ನಲು
ಭಾರಿ ಮಜಾ!




**Ravalgaon *Eclairs***

ದಿ ರಾವಳ್‌ಗಾಂವ್ ಶುಗರ್ ಫಾರ್ಮ್ ಲಿಮಿಟೆಡ್, ವಾಲ್ಚಂದ್ ಸಮೂಹದ ಉದ್ಯಮ
ಹೆಡ್ ಆಫೀಸು: ಕನ್‌ಸ್ಟ್ರಕ್ಷನ್ ಹೌಸ್, ವಾಲ್ಚಂದ್ ಹೀರಾಚಂದ್ ಮಾರ್ಗ್, ಬೆಲ್ಲಾರ್ಡ್ ಎಸ್ಟೇಟ್, ಬೊಂಬಾಯಿ 400 038.

Creative Unit-4627 Kan.




ಹೂವುಗಳೆಂದರೆ ನಮಗೆ ತುಂಬಾ ಪ್ರೀತಿ–ಚಿಕ್ಕ, ಹಸುರು ಎಲೆಗಳಿಂದ ಕೂಡಿದ, ಎಳೆಗೆಂಪು ಬಣ್ಣದ ಚಿಕ್ಕ ಚಿಕ್ಕ ಹೂವುಗಳು! ಎಷ್ಟು ಸುಂದರವಾಗಿವೆ ಅವು!

ಹೀಗಾಗಿ ನಾವು ಫ್ಲೋರಾ ಪೆನ್ಸಿಲುಗಳನ್ನು ಮೆಚ್ಚುವುದರಲ್ಲಿ ಆಶ್ಚರ್ಯವಿಲ್ಲ. ನನ್ನ ಹುಟ್ಟು ಹಬ್ಬಕ್ಕೆ ನಮ್ಮ ಅಮ್ಮ ಫ್ಲೋರಾ ಪೆನ್ಸಿಲುಗಳ ಒಂದು ಪೆಟ್ಟಿಗೆಯನ್ನೆ ತಂದುಕೊಟ್ಟಳು, ಗೊತ್ತೇನು? ಆ ಪೆನ್ಸಿಲುಗಳು ಎಲ್ಲರಿಗೂ ಬಹಳ ಇಷ್ಟವಾದುವು. ಸಂಜೆಯಾಗುವಾಗ ಒಂದು ಪೆನ್ಸಿಲು ಮಾತ್ರ ಉಳಿದಿತ್ತು, ಬಾಕಿ ಎಲ್ಲ ಕಾಣೆಯಾಗಿದ್ದುವು. ಆದರೂ ನನಗೇನೂ ಬೇಸರವಿಲ್ಲ. ಅವರೆಲ್ಲ ನನ್ನ ಗೆಳೆಯರು ತಾನೇ!

ಫ್ಲೋರಾ ಪೆನ್ಸಿಲುಗಳನ್ನು ಕೊಳ್ಳದೆ ಇರಲು ಮನಸ್ಸು ಕೇಳುವುದಿಲ್ಲ. ಅಷ್ಟು ಅಂದವಾಗಿವೆ ಅವು. ಅವು ತುಂಡಾಗುವುದೂ ಇಲ್ಲ.





ಕ್ಯಾಮ್ಲಿನ್ ಪ್ರೈವೇಟ್ ಲಿಮಿಟೆಡ್,
ಆರ್ಟ್ ಮೆಟೀರಿಯಲ್ ಡಿವಿಜನ್,
ಬೊಂಬಾಯಿ-400 056.

**ಕ್ಯಾಮೆಲ್ ಆರ್ಟ್ ಮೆಟೀರಿಯಲ್‌ಗಳ ತಯಾರಕರಿಂದ**




**ಕ್ಯಾಮ್ಲಿನ್ ಫ್ಲೋರಾ**

ಪೆನ್ಸಿಲುಗಳು

VISION 793 KAN

**Results of Chandamama—Camlin Colouring Contest No. 17 (Kannada)**

*1st Prize:* S. Manjanath, Gulbarga. *2nd Prize:* Mallappa Shankareppa Bagali, Rwatagaon P.O *3rd Prize:* Vivek Kodlekere, Bombay-34. *Consolation Prizes:* Rajesh Kumar, Dadballapur; T. S. Ashwini, Bangalore-560 050; M. K. Dinesh, Mysore-4; Jayalakshmi K. S., Chitradurga-577501; Sandhya B., Mangalore-575003.

# ಆನಂದ್‌ನ ಆಕಾಂಕ್ಷೆ–ಹಾರುವುದು













ಬರೀ ರೂ. 10/- ರಿಂದ ನಿಮ್ಮ ಮಗನ ಹೆಸರಿನಲ್ಲಿ ಒಂದು ಖಾತೆಯನ್ನು ತೆರೆಯಿರಿ. 12 ವರ್ಷಕ್ಕೆ ಬಂದ ಮೇಲೆ ಆತ ಸ್ವತಃ ತನ್ನ ಖಾತೆಯನ್ನು ನಡೆಸಬಹುದು. ಆತನ ಡಿಪಾಸಿಟ್ 5% ಬಡ್ಡಿಯನ್ನು ಗಳಿಸುತ್ತದೆ. ನಿಮ್ಮ ಮಗನ ಮತ್ತು ಆತ ಉಳಿಸಿದ ಹಣದ ಬೆಳವಣಿಗೆಯನ್ನು ನೋಡಿರಿ.

## ಮೈನರ್ಸ್ ಸೇವಿಂಗ್ಸ್ ಅಕೌಂಟ್



**ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ**

(ಭಾರತ ಸರಕಾರದ ಸಂಸ್ಥೆ)

ಜನತೆ ಇದ್ದಲ್ಲಿಗೆ ಸ್ಥಳದಿಂದ ಸ್ಥಳಕ್ಕೆ ಹೋಗುವ ಬ್ಯಾಂಕ್



# ರಾಮು ಮತ್ತು ಶ್ಯಾಮು

## ಮೋಸಗಾರರಿಗೆ ಶಾಸ್ತಿ






















ರಸಭರಿತ
ಸ್ವಾದಿಷ್ಟ
ಬಲು ಇಷ್ಟ

ಪಾರ್ಲೆ

**ಪಾಪಿನ್ಸ್** ಹಣ್ಣುಗಳ ಸ್ವಾದವುಳ್ಳ ಮಿಠಾಯಿಗಳು






5 ಹಣ್ಣುಗಳ ಸ್ವಾದಗಳು–
ರಾಸ್ಬೆರ್ರಿ, ಅನಾನಸ್, ನಿಂಬೆ,
ಕಿತ್ತಳೆ ಮತ್ತು ಮುಸಂಬಿ.